ಸಂಪುಟ ೧೫ ಸಂಚಿಕೆ ೩ ಸೆಪ್ಟೆಂಬರ್ 1994

# ಬ್ಯಾಂಕಿಂಗ್ ಪ್ರಪಂಚ






ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200


## ಈ ಸಂಚಿಕೆಯಲ್ಲಿ




ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦೦೦೨


ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

ಸಂಪುಟ ೧೫ ಸೆಪ್ಟೆಂಬರ್ ೧೯೯೪ ಸಂಚಿಕೆ ೩

# ಕಮ್ಮಟ: ಕಾಲು ಶತಕ

ಇದೇ ಅಕ್ಟೋಬರ್ 23ರಿಂದ 28ರ ವರೆಗೆ ಆರು ದಿನಗಳ ಕಾಲ ಮೈಸೂರಿನಲ್ಲಿ ಸಮನ್ವಯ ಸಮಿತಿಯ ಆಶ್ರಯದಲ್ಲಿ ಬ್ಯಾಂಕಿಂಗ್ ಕಮ್ಮಟ ನಡೆಯುತ್ತಿದೆ. ಇದು ಇಪ್ಪತ್ತೈದನೆಯ ಕಮ್ಮಟ.

ಕಮ್ಮಟ ಎಂದರೆ ಕುಲುಮೆ, ಟಂಕಸಾಲೆ. ಲೋಹವನ್ನು ಕಾಯಿಸಿ, ಕರಗಿಸಿ, ಅದರ ಕಶ್ಮಲ ಹೋಗಿಸಿ, ಅದನ್ನು ಕುಟ್ಟಿ, ತಟ್ಟಿ, ಅದಕ್ಕೆ ಬೇಕಾದ ರೂಪು ಆಕಾರ ನೀಡುವ, ಅದನ್ನು ಎರಕಹೊಯ್ಯುವ, ಟಂಕಿಸುವ ಕಾರ್ಯಕ್ಕೆ ಸಂಬಂಧಿಸಿದ್ದು. ಬ್ಯಾಂಕಿಂಗ್ ವಿಚಾರ ಕುರಿತಂತೆ ಸಾಹಿತ್ಯ ರಚನೆ, ಲೇಖನ ಮಂಡನೆ, ಚರ್ಚೆ, ಭಾಷೆಯ ಮತ್ತು ಪದಗಳ ಉಚಿತ ಪ್ರಯೋಗದ ಬಗ್ಗೆ ಸಮಾಲೋಚನೆ — ಇಂಥ ಕೆಲಸವೇ ಬ್ಯಾಂಕಿಂಗ್ ಕಮ್ಮಟದ ಉದ್ದೇಶ. ಇದನ್ನೆಲ್ಲ ನಾವು ನಮ್ಮ ಭಾಷೆಯಾದ ಕನ್ನಡದಲ್ಲಲ್ಲದೆ ಬೇರೆ ಯಾವ ಭಾಷೆಯಲ್ಲಿ ಮಾಡಿದರೆ ಸಾರ್ಥಕವಾದೀತು? ಬ್ಯಾಂಕಿಂಗ್ ಕಮ್ಮಟ ಎಂದರೆ ಅದು ಕನ್ನಡದ ಕಮ್ಮಟ ಎಂಬುದು ಸ್ವಯಂವೇದ್ಯ.

ಭಾಷೆ ಒಂದು ಮಾಧ್ಯಮವಷ್ಟೆ. ಅದೊಂದು ಸಂವಹನಸಾಧನ. ವಿದ್ಯುತ್ತನ್ನು ಒಂದೆಡೆಯಿಂದ ಇನ್ನೊಂದು ಎಡೆಗೆ ಸಾಗಿಸಲು ಸಾಧನವಾದ ತಂತಿಯಂತೆ, ವಿದ್ಯುದ್ವಾಹಕದಂತೆ ಅದು ವಿಚಾರ ವಾಹಕ. ವಾಹಕವೇ ನಿರೋಧವನ್ನೊಡ್ಡಿದರೆ ಆದರಿಂದ ವೃಥಾ ಘರ್ಷಣೆ, ಸಂವಹನಕ್ಕೆ ತಡೆ, ಶಕ್ತಿಯ ಸೋರಿಕೆ. ಅದರಿಂದ ಅಪಾಯ ಕೂಡ. ವಿಚಾರದ ಸಂವಹನದಲ್ಲಿ ಹೀಗಾದರೆ ಅದು ವಿಕೃತಗೊಳ್ಳಬಹುದು, ಸಂದೇಶವೇ ತಪ್ಪಾಗಬಹುದು. ಅದರಿಂದ ವ್ಯವಹಾರದಲ್ಲಿ ಅಪಾರವಾದ ಕಷ್ಟ ನಷ್ಟ. ಭಾಷೆ ಸುವಾಹಕವಾದಾಗ ಎಲ್ಲವೂ ನೇರ್ಪು. ಯಾರು ವ್ಯವಹಾರ ಮಾಡುತ್ತಾರೋ ಅವರ ಭಾಷೆಯೇ ಅವರ ಮಟ್ಟಿಗೆ ಸುವಾಹಕ. ಅನ್ಯಭಾಷೆ ದುರ್ವಾಹಕ. ಅದನ್ನಿಟ್ಟುಕೊಂಡು ಏನು ಮಾಡಬೇಕು?

ಜನರ ಭಾಷೆಯಲ್ಲಿ ಬ್ಯಾಂಕಿಂಗ್ ವಿಚಾರ ಕುರಿತ ಚಿಂತನ ಅಭಿವ್ಯಕ್ತಿಗಳನ್ನು ಸಮರ್ಥವಾದ ರೀತಿಯಲ್ಲಿ ಸಾಧಿಸುವ ಉದ್ದೇಶದಿಂದ ಭಾರತೀಯ ಸ್ಟೇಟ್ ಬ್ಯಾಂಕಿನ ಕನ್ನಡ ಸಂಘಗಳ ಸಮನ್ವಯ ಸಮಿತಿ ಈಗ್ಗೆ ಸುಮಾರು ಹದಿನೈದು ವರ್ಷಗಳ ಹಿಂದೆ 'ಬ್ಯಾಂಕಿಂಗ್ ಪ್ರಪಂಚ' ಪತ್ರಿಕೆಯನ್ನು ಆರಂಭಮಾಡಿತು. ಇದು ಭಾರತೀಯ ಸ್ಟೇಟ್ ಬ್ಯಾಂಕಿನ ಮುಖಪತ್ರವೇನೂ ಅಲ್ಲ, ಅದರ ಗೃಹ ಪತ್ರಿಕೆಯೂ ಅಲ್ಲ, ಆ ಬ್ಯಾಂಕಿನ ಕನ್ನಡ ಸಂಘಗಳ ಸಮನ್ವಯ ಸಮಿತಿಯ ವಾರ್ತಾಪತ್ರವಲ್ಲ. ಹಣ ಮತ್ತು ಬ್ಯಾಂಕಿಂಗ್ ವಿಚಾರಗಳನ್ನು ಕುರಿತ — ಈ ಕ್ಷೇತ್ರದಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಉಪಯುಕ್ತವಾಗುವ — ಸಾಹಿತ್ಯಸೃಷ್ಟಿ ಮತ್ತು ಪ್ರಸಾರವೂ, ಈ ವಿಚಾರಗಳಲ್ಲಿ ಅತ್ಯಂತ ಈಚಿನದೆನ್ನಬಹುದಾದಂಥ ಎಲ್ಲ ಬೆಳವಣಿಗೆಗಳ ವಿವೇಚನೆಯೂ ಇದರ ಉದ್ದೇಶ. ಬ್ಯಾಂಕಿಂಗ್ ಉದ್ಯೋಗಿಗಳ ತಿಳಿವಿನ ಮಟ್ಟವನ್ನು ಹೆಚ್ಚಿಸುವ, ಬ್ಯಾಂಕಿಂಗ್ ಸೇವೆಯನ್ನು ಹೆಚ್ಚು ದಕ್ಷವಾದ್ದನ್ನಾಗಿ ಮಾಡುವ ಪ್ರಯತ್ನವಿದು. ಎಲ್ಲವನ್ನೂ ಇಲ್ಲಿಯ ಭಾಷೆಯಾದ ಕನ್ನಡದ ಮೂಲಕ ಮಾಡುವುದರಿಂದ ಸಂವಹನ ನೇರ, ಸುಲಭ. ಸಂಕೀರ್ಣವಾದ ಭಾವನೆಗಳನ್ನು ಕನ್ನಡದಲ್ಲಿ ಅಭಿವ್ಯಕ್ತಿಸುವುದು ಸಾಧ್ಯವಾಗುವಂತೆ ಅದಕ್ಕೆ ತಕ್ಕ ಪರಿಭಾಷೆಯ ಸೃಷ್ಟಿ ಮತ್ತು ಅದರ ಪ್ರಚಾರಕ್ಕಾಗಿಯೂ 'ಬ್ಯಾಂಕಿಂಗ್ ಪ್ರಪಂಚ' ಶ್ರಮಿಸುತ್ತಿದೆ.

ಆದರೆ ಇಂಥ ಪತ್ರಿಕೆಯೊಂದನ್ನು ನಡೆಸುವುದು ಸುಲಭದ ಕೆಲಸವಲ್ಲ. ಆರ್ಥಿಕ ಸಮಸ್ಯೆಯ ಜೊತೆಗೆ ಲೇಖನಗಳನ್ನು ಸಂಪಾದಿಸುವ ಸಮಸ್ಯೆ. ಈ ಕ್ಷೇತ್ರದಲ್ಲೇ ಕಾರ್ಯನಿರತರಾದ ಹಾಗೂ ಈ ವಿಚಾರದಲ್ಲಿ ಆಸಕ್ತಿ ಹೊಂದಿರುವ ಲೇಖಕರ ಮತ್ತು ವಾಚಕರ ಪ್ರೋತ್ಸಾಹ ಹಾಗೂ ಸಕ್ರಿಯವಾದ ನೆರವು ಇಲ್ಲದಿದ್ದರೆ ಇದು ನಡೆಯುವುದು ಕಷ್ಟ. ಹಣ ಮತ್ತು ಬ್ಯಾಂಕಿಂಗ್ ವಿಚಾರಗಳನ್ನು ಕುರಿತು ಲೇಖನಗಳನ್ನು ಬರೆಯಬಲ್ಲವರ ತಂಡವೊಂದನ್ನು ರಚಿಸುವುದು ಅಗತ್ಯವೆನಿಸಿತು. ಜೊತೆಗೆ ಇದಕ್ಕೆ ಸಂಬಂಧಿಸಿದ ಪರಿಭಾಷೆಯ ಸೃಷ್ಟಿಗೂ ಯತ್ನ ನಡೆಸಬೇಕಾಗಿತ್ತು. ಈ ಎರಡೂ ಉದ್ದೇಶಗಳನ್ನು ಪೂರೈಸುವ ಸಲುವಾಗಿ ಹನ್ನೆರಡು ವರ್ಷಗಳ ಹಿಂದೆ ಬ್ಯಾಂಕಿಂಗ್ ಕಮ್ಮಟದ ಯೋಜನೆಯನ್ನು ಹಮ್ಮಿಕೊಳ್ಳಲಾಯಿತು. ಇಂಥ ಪ್ರಯೋಗವೊಂದು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ನಡೆದಿತ್ತು. ಕನ್ನಡ ಮಾಧ್ಯಮ ತರಗತಿಗಳ ಉತ್ಸಾಹ ಇದ್ದ ಕಾಲ ಅದು. ಕನ್ನಡ ಮಾಧ್ಯಮದಲ್ಲಿ ಪದವಿ ತರಗತಿಗಳಿಗೆ ಬೋಧನೆ ಮಾಡುವ ಬಗ್ಗೆ ಕಾಲೇಜುಗಳ ಅಧ್ಯಾಪಕರಿಗೆ ತರಬೇತಿ ನೀಡುವ ಉದ್ದೇಶದಿಂದ ವಿಶ್ವವಿದ್ಯಾನಿಲಯ ಅನುದಾನ ಆಯೋಗದ ನೆರವಿನಿಂದ ಕಾರ್ಯಶಿಬಿರವನ್ನು ಏರ್ಪಡಿಸಲಾಗುತ್ತಿತ್ತು. ಅದರಲ್ಲಿ ಭಾಗವಹಿಸುತ್ತಿದ್ದ ಅಧ್ಯಾಪಕರಲ್ಲಿ ಒಬ್ಬೊಬ್ಬರೂ ತಂತಮ್ಮ ವಿಷಯಕ್ಕೆ ಸಂಬಂಧಿಸಿದಂತೆ ಅಲ್ಲಿ ಕನ್ನಡದಲ್ಲಿ ಬೋಧನೆ ಮಾಡಬೇಕಾಗಿತ್ತು. ಉಳಿದವರು ಆಲಿಸುವವರು. ಬೋಧನೆಯಲ್ಲಿ ಬಳಸಿದ ಭಾಷೆ, ಪಾರಿಭಾಷಿಕ ಪದಗಳು, ವಿಷಯ ಪ್ರತಿಪಾದನೆ ಮುಂತಾದ ವಿಚಾರಗಳ ಬಗ್ಗೆ ಚರ್ಚೆ ನಡೆಯುತ್ತಿತ್ತು. ಜೊತೆಗೆ ಭಾಷಾಂತರ ಕಾರ್ಯವನ್ನೂ ಕೈಗೊಳ್ಳಲಾಗುತ್ತಿತ್ತು. ನಾನಾ ವಿಷಯಗಳಿಗೆ ಸಂಬಂಧಿಸಿದಂತೆ ತಜ್ಞರಿಂದ ಅತಿಥಿ ಭಾಷಣಗಳನ್ನು ಏರ್ಪಡಿಸಲಾಗುತ್ತಿತ್ತು.

ಸಾಕಷ್ಟು ಉತ್ಸಾಹ ಹಾಗೂ ಪ್ರೋತ್ಸಾಹವಿಲ್ಲದ್ದರಿಂದ ಮೈಸೂರು ವಿಶ್ವವಿದ್ಯಾನಿಲಯದ ಆ ಪ್ರಯೋಗ ಕೆಲವು ವರ್ಷಗಳ ಅನಂತರ ನಿಂತು ಹೋಯಿತು. ಸಮನ್ವಯ ಸಮಿತಿಯ ಆಶ್ರಯದಲ್ಲಿ ಹಣ ಮತ್ತು ಬ್ಯಾಂಕಿಂಗ್ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕಮ್ಮಟವನ್ನು ನಡೆಸಬಾರದೇಕೆಂಬ ವಿಚಾರ ಬಂದಾಗ ಅದರ ಉತ್ಸಾಹಿ ಕಾರ್ಯಕರ್ತರು ಕೂಡಲೇ ಈ ಕಾರ್ಯಕ್ಕೆ ಮುಂದೆ ಬಂದರು. ಆದರೆ ವಿಶ್ವವಿದ್ಯಾನಿಲಯದಂಥ ಸಂಸ್ಥೆಯೇ ಕಮ್ಮಟವನ್ನು ನಡೆಸಲಾರದೆ ನಿಲ್ಲಿಸಿರುವಾಗ ಯಾವುದೇ ನೆರವಾಗಲಿ, ಪ್ರೋತ್ಸಾಹವಾಗಲಿ ಇಲ್ಲದೆ ಸಮನ್ವಯ ಸಮಿತಿಯಂಥ ಸ್ವಯಂಪ್ರೇರಣೆಯ ಸಂಘ ಇದನ್ನು ಕೈಗೆತ್ತಿಕೊಂಡು ಯಶಸ್ವಿಯಾಗಿ ನಡೆಸಬಲ್ಲದೆ ಎಂಬ ಸಂದೇಹ ಮೂಡಿತು. ಆದರೆ ಸಮಿತಿಯ ಕಾರ್ಯಕರ್ತರಲ್ಲಿ ಉತ್ಸಾಹಕ್ಕೇನೂ ಕೊರತೆಯಿರಲಿಲ್ಲ. 1982ರ ಏಪ್ರಿಲ್ ತಿಂಗಳಲ್ಲಿ ಮೊದಲನೆಯ ಬ್ಯಾಂಕಿಂಗ್ ಕಮ್ಮಟ ಮೈಸೂರಿನಲ್ಲಿ ನಡೆಯಿತು. ಇದೇ ಮೊದಲನೆಯ ಹಾಗೂ ಕೊನೆಯ ಕಮ್ಮಟವಾದೀತೇನೋ ಎಂಬ ಶಂಕೆಯಂತೂ ಇದ್ದೇ ಇತ್ತು.

ಸ್ವಯಂಪ್ರೇರಣೆಯ ಈ ಕಮ್ಮಟ ಪಡೆದ ಯಶಸ್ಸು ತುಂಬ ಆಶ್ಚರ್ಯವನ್ನೇ ಉಂಟುಮಾಡಿತು. ಇನ್ನು ಮುಂದೆ ಪ್ರತಿ ಆರು ತಿಂಗಳುಗಳಿಗೆ ಒಂದರಂತೆ ರಾಜ್ಯದ ಬೇರೆಬೇರೆ ಜಿಲ್ಲೆಗಳಲ್ಲಿ ಬ್ಯಾಂಕಿಂಗ್ ಕಮ್ಮಟ ಏರ್ಪಡಿಸಬೇಕೆಂಬ ಹುರುಪು ಮೂಡಿತು. ಅಂದಿನಿಂದ ವರ್ಷಕ್ಕೆ ಎರಡರಂತೆ ಕಮ್ಮಟಗಳು ನಡೆಯುತ್ತ ಬಂದಿವೆ. ರಾಜ್ಯದ ಎಲ್ಲ ಜಿಲ್ಲೆಗಳನ್ನೂ ಮುಗಿಸಿ ಸೊಲ್ಲಾಪುರ ಮತ್ತು ಕಾಸರಗೋಡಿನಲ್ಲೂ ಕಮ್ಮಟಗಳು ನಡೆದಿವೆ. ಮತ್ತೆ ರಾಜ್ಯದ ಜಿಲ್ಲೆಗಳಲ್ಲಿ ಮುಂದುವರಿದಿವೆ. ಈಗ ಮೈಸೂರಿನಲ್ಲಿ ಎರಡನೆಯ ಬಾರಿಗೆ ಇದು ನಡೆಯುತ್ತಿದೆ.

ಆರಂಭದಲ್ಲಿ ಬ್ಯಾಂಕುಗಳ ಆಡಳಿತ ವ್ಯವಸ್ಥೆಯಿಂದ ಕಮ್ಮಟಕ್ಕೆ ಅಂಥದೇನೂ ಉತ್ತೇಜನ ದೊರಕಲಿಲ್ಲ. ಕನ್ನಡವೆಂದರೇ ಆಡಳಿತ ವರ್ಗಗಳವರು ಬೆಚ್ಚಿಬೀಳುತ್ತಿದ್ದ ಕಾಲ ಅದು. ಅವರಿಂದ ಪ್ರೋತ್ಸಾಹ ದೊರಕುವುದಿರಲಿ, ಇದರಲ್ಲಿ ಭಾಗವಹಿಸುತ್ತಿದ್ದವರನ್ನು ಅವರು ಸಂಶಯದೃಷ್ಟಿಯಿಂದ ನೋಡುತ್ತಿದ್ದರು. ಇದರಲ್ಲಿ ಭಾಗವಹಿಸುವವರಿಗೆ ರಜೆ ಕೊಡಲು ಕೂಡ ಅವರಿಗೆ ಇಷ್ಟ ಇರಲಿಲ್ಲ. ಆದರೆ ಕ್ರಮೇಣ ಅವರ ಧೋರಣೆ ಬದಲಾಗಿರುವುದು ಸಂತೋಷದ ಸಂಗತಿ. ಈಗ ಭಾರತೀಯ ಸ್ಟೇಟ್ ಬ್ಯಾಂಕ್, ಮೈಸೂರು ಬ್ಯಾಂಕ್, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್–ಇವುಗಳಿಂದ ಅಧಿಕೃತವಾಗಿ ಉದ್ಯೋಗಿಗಳು ಕಮ್ಮಟದಲ್ಲಿ ಭಾಗವಹಿಸುತ್ತಿದ್ದಾರೆ. ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವೂ ಆಗಾಗ ಸಹಯೋಗ ನೀಡುತ್ತಿದೆ, ಸಹಾಯವನ್ನೂ ಮಾಡುತ್ತಿದೆ. ಈ ಬ್ಯಾಂಕುಗಳ ಉದ್ಯೋಗಿಗಳಲ್ಲದೆ ಇತರ ಕೆಲವು ಬ್ಯಾಂಕುಗಳ ಉದ್ಯೋಗಿಗಳು, ಲೇಖಕರು, ಅಧ್ಯಾಪಕರು, ನ್ಯಾಯವಾದಿಗಳು, ಹೀಗೆ ಹಲವರು ಸ್ವಇಚ್ಛೆಯಿಂದ ಇದರಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಕಮ್ಮಟದಿಂದ ಕಮ್ಮಟಕ್ಕೆ ಭಾಗಿಗಳ ಸಂಖ್ಯೆ ಹೆಚ್ಚುತ್ತಿದೆ. ಕಮ್ಮಟಿಗರ ಸಂಖ್ಯೆ ಹೆಚ್ಚಿದಷ್ಟೂ ಗುಣಮಟ್ಟ ಕಡಿಮೆಯಾಗುವುದೆಂಬ ಅಂಜಿಕೆ ಇಲ್ಲದಿಲ್ಲ. ಆದರೆ ಉತ್ಸಾಹದಿಂದ ಬರುವವರನ್ನು ತಡೆಯುವುದು ಉಚಿತವಲ್ಲವೆನಿಸಿದೆ.

ಬ್ಯಾಂಕಿಂಗ್ ಕಮ್ಮಟ ಯಶಸ್ವಿಯಾಗಿರುವುದಕ್ಕೆ ಮುಖ್ಯ ಕಾರಣವೆಂದರೆ ಅದರ ಹೊಸತನ. ಇತರ ಕಮ್ಮಟಗಳಲ್ಲೂ, ತರಬೇತಿ ಕೇಂದ್ರಗಳಲ್ಲೂ ತರಬೇತಿ ನೀಡುವವರು ಮತ್ತು ತರಬೇತಿ ಪಡೆಯುವವರು ಎಂಬ ಎರಡು ವರ್ಗಗಳುಂಟು. ಅತಿಥಿ ಭಾಷಣಕಾರರೂ ಉಪನ್ಯಾಸ ಮಾಡುವವರೇ ಆಗಿರುತ್ತಾರೆ. ಈ ಕಮ್ಮಟದ ವೈಶಿಷ್ಟ್ಯವೆಂದರೆ, ಇದರಲ್ಲಿ ಭಾಗವಹಿಸುವ ಒಬ್ಬೊಬ್ಬರೂ ಬೋಧಕರೂ ಪ್ರಶಿಕ್ಷಣಾರ್ಥಿಗಳೂ ಆಗಿರುತ್ತಾರೆ. ಪ್ರತಿಯೊಬ್ಬರೂ ತಮಗೆ ಪರಿಚಿತವಾದ ಯಾವುದಾದರೊಂದು ವಿಷಯದ ಬಗ್ಗೆ ಒಂದು ಪ್ರಬಂಧವನ್ನು ಮಂಡಿಸಬೇಕು. ಆ ವಿಷಯಕ್ಕೆ ಸಂಬಂಧಿಸಿದಂತೆ ಅವರೇ ತಜ್ಞರು. ಆ ಪ್ರಬಂಧದ ವಿಷಯ, ಭಾಷೆ, ಪಾರಿಭಾಷಿಕ ಪದ, ಪ್ರತಿಪಾದನೆಯ ವಿಧಾನ, ಪರಿಣಾಮ ಮುಂತಾದವನ್ನು ಕುರಿತು ಇನ್ನೊಬ್ಬರು ಪ್ರಧಾನವಾಗಿ ವಿಮರ್ಶೆ ಮಾಡುತ್ತಾರೆ. ಅವರು ಆ ಪ್ರಬಂಧದ ಮಟ್ಟಿಗೆ ಪ್ರಧಾನ ವಿಮರ್ಶಕರು. ಆಮೇಲೆ ಪ್ರತಿಯೊಬ್ಬ ಕಮ್ಮಟಿಗರೂ ತಂತಮ್ಮ ಅನಿಸಿಕೆಗಳನ್ನು ತಿಳಿಸುತ್ತಾರೆ. ಮೇಜಿನ ಸುತ್ತಲೂ ಸಮಾನರಾಗಿ ಕುಳಿತ ಈ ಎಲ್ಲರ ವಿಮರ್ಶೆಯೂ ಮುಗಿದ ಮೇಲೆ, ಅವರ ಈ ಎಲ್ಲ ವಿಮರ್ಶೆಗಳಿಗೂ ಪ್ರಬಂಧಕಾರರು ಉತ್ತರ ನೀಡುತ್ತಾರೆ. ಸೂಚನೆಗಳಲ್ಲಿ ಯಾವುವನ್ನು ಸ್ವೀಕರಿಸಬಹುದು, ಪ್ರಬಂಧವನ್ನು ಹೇಗೆ ಪರಿಷ್ಕರಿಸಿ ಉತ್ತಮಪಡಿಸಬಹುದು ಎಂಬುದರ ಬಗ್ಗೆ ತಮ್ಮ ಇಂಗಿತವನ್ನು ತಿಳಿಸುತ್ತಾರೆ. ಅನಂತರ ಕಮ್ಮಟದ ನಿರ್ದೇಶಕರು ಈ ಎಲ್ಲ ಚರ್ಚೆಯ ಬೆಳಕಿನಲ್ಲಿ ತಾವು ಹೇಳಬೇಕಾದ್ದನ್ನು ಹೇಳುತ್ತಾರೆ. ಪ್ರಬಂಧದಲ್ಲಿ ಬಳಸಲಾಗಿರುವ ಪಾರಿಭಾಷಿಕ ಪದಗಳ ಬಗ್ಗೆ ಚರ್ಚೆ ನಡೆಯುತ್ತದೆ. ಯಾವ ಪದಗಳನ್ನು ಇಟ್ಟುಕೊಳ್ಳಬಹುದು ಎಂಬುದರ ನಿರ್ಣಯವಾಗುತ್ತದೆ. ಅಗತ್ಯವಿದ್ದರೆ ಹೊಸ ಪದಗಳನ್ನು ಟಂಕಿಸಲಾಗುತ್ತದೆ.

ಕಮ್ಮಟದಲ್ಲಿ ಭಾಷಾಂತರಕ್ಕೆ ಯಾವುದಾದರೊಂದು ಇಂಗ್ಲಿಷ್ ಲೇಖನವನ್ನು ಆರಿಸಿಕೊಳ್ಳಲಾಗುತ್ತದೆ. ಆ ಲೇಖನದ ಒಂದೊಂದು ಭಾಗವನ್ನು ಒಬ್ಬೊಬ್ಬ ಕಮ್ಮಟಿಗರು ಭಾಷಾಂತರ ಮಾಡಿ ತಂದಿರುತ್ತಾರೆ. ಒಂದೊಂದು ವಾಕ್ಯವನ್ನೂ ಕಮ್ಮಟದಲ್ಲಿ ಓದಿ ಅದರ ಬಗ್ಗೆ ಚರ್ಚೆ ನಡಸಲಾಗುತ್ತದೆ. ಮೂಲದ ಭಾವ ಕನ್ನಡದಲ್ಲಿ ಸಾಧ್ಯವಾದ ಮಟ್ಟಿಗೆ ಮೂಡುವಂತೆ ಮಾಡಲು ಯತ್ನಿಸಲಾಗುತ್ತದೆ. ಈ ಸಾಮೂಹಿಕ ಚಿಂತನೆಯ ಫಲವಾಗಿ ಅಂತಿಮವಾಗಿ ಲೇಖನದ ಕನ್ನಡ ಅನುವಾದ ರೂಪು ತಳೆಯುತ್ತದೆ. ಇಲ್ಲಿ ಕೂಡ ಪಾರಿಭಾಷಿಕ ಪದಗಳ ಬಗ್ಗೆ ಸಾಕಷ್ಟು ಚರ್ಚೆ ನಡೆಯುತ್ತದೆ. ಪರಿಷ್ಕರಿಸಿದ ಪ್ರಬಂಧಗಳನ್ನೂ ಭಾಷಾಂತರಿಸಲಾದ ಲೇಖನವನ್ನೂ 'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಪ್ರಕಟಿಸಲಾಗುತ್ತದೆ. ಹೀಗಾಗಿ 'ಬ್ಯಾಂಕಿಂಗ್ ಪ್ರಪಂಚಕ್ಕೆ' ಪ್ರಚಲಿತ ಬ್ಯಾಂಕಿಂಗ್ ವಿಚಾರಗಳನ್ನು ಕುರಿತ ಲೇಖನಗಳು ದೊರಕುತ್ತಿವೆ. ಕನ್ನಡದಲ್ಲಿ ಈ ವಿಷಯಕ್ಕೆ ಸಂಬಂಧಿಸಿದ ಪರಿಭಾಷೆ ಸೃಷ್ಟಿಯಾಗುತ್ತಿದೆ. ಕನ್ನಡದಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಬಲ್ಲ ಲೇಖಕರ ತಂಡದ ನಿರ್ಮಾಣವಾಗುತ್ತಿದೆ. ಯಾವುದೇ ನಿರ್ಬಂಧವಿಲ್ಲದೆ ವಸ್ತುನಿಷ್ಠೆಯಿಂದ ಕೂಡಿದ ಚರ್ಚೆ ಅಭ್ಯಾಸ

ವಾಗುತ್ತದೆ. ಕಮ್ಮಟದಲ್ಲಿ ಭಾಗವಹಿಸುವವರಲ್ಲಿ ಆತ್ಮೀಯತೆ ಬೆಳೆಯುತ್ತದೆ. ಅವರಿಗೆ ಅರಿವಿಲ್ಲದೆಯೇ ಅವರಲ್ಲಿ ಕನ್ನಡದ ಬಗ್ಗೆ ಅಭಿಮಾನ ಬೆಳೆಯುತ್ತದೆ. ಅಲ್ಲದೆ ತಮ್ಮ ಕಾರ್ಯಕ್ಷೇತ್ರಕ್ಕೆ ಸಂಬಂಧಿಸಿದಂತೆ ಇತ್ತೀಚಿನ ಜ್ಞಾನದ ಸಂಪಾದನೆಯಾಗುತ್ತದೆ. ಬ್ಯಾಂಕುಗಳ ತರಬೇತಿ ಕೇಂದ್ರಗಳ ಉದ್ದೇಶವನ್ನು ಕಮ್ಮಟ ಹೆಚ್ಚು ಸಮರ್ಥವಾಗಿ, ಸಮರ್ಪಕವಾಗಿ ನಿರ್ವಹಿಸುತ್ತಿದೆ. ಬ್ಯಾಂಕುಗಳ ಮೇಲಧಿಕಾರಿಗಳೂ ಸಾರ್ವಜನಿಕರೂ ಸಾಹಿತಿಗಳೂ ವಿಚಾರ ವಂತರೂ ಕಮ್ಮಟಗಳಿಗೆ ಅತಿಥಿ ಭಾಷಣಕಾರರಾಗಿ ಬಂದು, ಇಲ್ಲಿಯ ಕಲಾಪಗಳನ್ನು ನೋಡಿ ಮೆಚ್ಚುಗೆಯ ಮಾತಾಡಿದ್ದಾರೆ, ಕಮ್ಮಟ ದಲ್ಲಿ ತಾವೂ ಭಾಗವಹಿಸಿದ್ದಾರೆ.

ಕಮ್ಮಟ ಸಾಮಾನ್ಯವಾಗಿ ಆರು ದಿನಗಳ ಕಾಲ ನಡೆಯುತ್ತದೆ. ಬೆಳಗ್ಗೆ ಒಂಬತ್ತರಿಂದ ಸಂಜೆ ಐದು ಗಂಟೆಯವರೆಗೆ ಎಂದು ವೇಳೆ ಯನ್ನು ಗೊತ್ತುಮಾಡಿಕೊಂಡಿದ್ದರೂ ಅನೇಕ ವೇಳೆ ಕಮ್ಮಟಿಗರು ಉತ್ಸಾಹದಿಂದ ಅರ್ಧರಾತ್ರಿಯವರೆಗೂ ಕುಳಿತು ಚರ್ಚೆಯಲ್ಲಿ ತೊಡಗಿರುವುದುಂಟು. ಅನೇಕ ವೇಳೆ ಅನಂತರವೂ ಬಿಡಾರದಲ್ಲಿ ಚರ್ಚೆಯನ್ನು ಮುಂದುವರಿಸಿರುವುದುಂಟು. ಇಷ್ಟೊಂದು ಉತ್ಸಾಹ ಬಹುಶಃ ಬೇರೆ ಕಮ್ಮಟಗಳಲ್ಲಿ ಕಂಡುಬರಲಾರದು. ಜಾತಿ, ಮತ, ಅಂತಸ್ತು ಮುಂತಾದ ಯಾವ ಭೇದಭಾವವೂ ಇಲ್ಲದ, ಸಹಜೀವನ ಸಹಚಿಂತನಗಳ ಮಹಾಪ್ರಯೋಗವಿದು ಎನಿಸುತ್ತದೆ.

ಕಮ್ಮಟ ಕೇವಲ ಬೌದ್ಧಿಕ ಕಸರತ್ತಾಗಿ ಉಳಿದಿಲ್ಲ. ಈ ಆರು ದಿನ ಗಳಲ್ಲಿ ಅನೇಕ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುತ್ತವೆ. ರಸ ಪ್ರಶ್ನೆ, ಆಶುಭಾಷಣ, ಭಾವಗೀತೆಗಳ ಹಾಡುಗಾರಿಕೆ, ಕವಿಗೋಷ್ಠಿ, ಸಾಂಸ್ಕೃತಿಕ ಪ್ರವಾಸ, ಸಂವಾದ ಕಾರ್ಯಕ್ರಮ, ಕ್ರೀಡೆಗಳು ಮುಂತಾದವುಕ್ಕೂ ಈ ಆರು ದಿನಗಳಲ್ಲಿ ಅವಕಾಶ ಇರುತ್ತದೆ. ಸ್ಥಳೀಯ ಕವಿಗಳೂ ಕಮ್ಮಟಿಗರೂ ಕವಿಗೋಷ್ಠಿಯಲ್ಲಿ ಪಾಲ್ಗೊಳ್ಳು ತ್ತಾರೆ. ವಿಚಾರ ಸಾಹಿತ್ಯ, ಸೃಜನಶೀಲ ಸಾಹಿತ್ಯ ಎಂದು ಸಾಹಿತ್ಯ ವನ್ನು ಬೇರೆಬೇರೆಯಾಗಿ ಕಾಣುವ ಪ್ರವೃತ್ತಿಯನ್ನು ತೊಡೆದು ಹಾಕುವ ಪ್ರಯತ್ನ ನಡೆದಿದೆ. ಕಮ್ಮಟಿಗರನೇಕರಲ್ಲಿ ಸುಪ್ತವಾಗಿರುವ ಪ್ರತಿಭೆ ಹೊಮ್ಮಲು ಇದೊಂದು ನಿಮಿತ್ತ. ಕಮ್ಮಟದಲ್ಲಿ ಮೊದಲ ಬಾರಿಗೆ ಕವನ ಬರೆದು ಓದಿದವರಲ್ಲಿ ಹಲವರು ಈಗ ಈ ಕ್ಷೇತ್ರ ದಲ್ಲೂ ಮುಂದುವರಿದಿದ್ದಾರೆ.

ರಾಜ್ಯದ ಬೇರೆ ಬೇರೆ ಎಡೆಗಳಲ್ಲಿ ಕಮ್ಮಟ ನಡೆಸುವುದರಿಂದ ಅಲ್ಲಲ್ಲಿಯ ಜನಜೀವನ, ಆರ್ಥಿಕ ಪರಿಸ್ಥಿತಿ, ಭಾಷೆಯ ಪರಿಸ್ಥಿತಿ, ಸಾಂಸ್ಕೃತಿಕ ಸ್ವರೂಪ ಇವುಗಳ ಪರಿಚಯ ಕಮ್ಮಟಿಗರಿಗೆ ಆಗುತ್ತದೆ. ಇದರಿಂದ ಅವರ ಭಾವಲೋಕ, ಅನುಭವಲೋಕ ವಿಸ್ತಾರವಾಗು ತ್ತವೆ.

ಬ್ಯಾಂಕಿಂಗ್ ಕಮ್ಮಟ ನಡೆಯುವ ಪ್ರತಿಯೊಂದು ಸ್ಥಳದಲ್ಲೂ ಒಂದು ದಿನ ಸಂಜೆ ನಡಸುವ ಕವಿಗೋಷ್ಠಿ ಕಾರ್ಯಕ್ರಮದಲ್ಲಿ ಸ್ಥಳೀಯ ಕವಿಗಳೂ ಪಾಲ್ಗೊಳ್ಳುವುದರಿಂದ ಮೇಲೆ ಹೇಳಿದ ಉದ್ದೇಶವನ್ನೂ ಸಾಧಿಸಲು ಬಹಳ ಮಟ್ಟಿಗೆ ಅವಕಾಶ ಒದಗು ತ್ತದೆ. ಸಾಧ್ಯವಿದ್ದ ಎಡೆಗಳಲ್ಲೆಲ್ಲ ಸ್ಥಳೀಯ ವಿಚಾರವಂತರನ್ನೂ ಉದ್ಯಮಶೀಲರನ್ನೂ ಬ್ಯಾಂಕ್ ಗ್ರಾಹಕರನ್ನೂ ಒಳಗೊಂಡ ವಿಚಾರಸಂಕಿರಣಗಳನ್ನು ಕೂಡ ಏರ್ಪಡಿಸಲಾಗುತ್ತದೆ. ಇದರಿಂದ ಸ್ಥಳೀಯ ಸಮಸ್ಯೆಗಳ ಅರಿವು ಕಮ್ಮಟಿಗರಿಗೆ ಉಂಟಾಗುವುದಲ್ಲದೆ, ಸ್ಥಳೀಯರಿಗೆ ಕಮ್ಮಟದ ಉದ್ದೇಶದ ಪರಿಚಯ ಮಾಡಿಕೊಟ್ಟಂತಾ ತ್ತದೆ. ಬ್ಯಾಂಕುಗಳಲ್ಲಿ ಕನ್ನಡದಲ್ಲೇ ವ್ಯವಹಾರ ಮಾಡುವುದರ ಬಗ್ಗೆ ಸಾರ್ವಜನಿಕರಲ್ಲಿ ಆಸಕ್ತಿ ಮೂಡಿಸಲೂ ಸಹಾಯವಾಗುತ್ತದೆ.

ಬ್ಯಾಂಕಿಂಗ್ ಕಮ್ಮಟಗಳಲ್ಲಿ ನಡೆದ ಚರ್ಚೆಗಳ ಫಲವಾಗಿ ಹಲವು ಕೃತಿಗಳು ಹೊರಬಂದಿವೆ. ಅವುಗಳಲ್ಲಿ 'ಬ್ಯಾಂಕಿಂಗ್‌ನಿಘಂಟು' ಒಂದು ಮುಖ್ಯವಾದದ್ದು. ಹಣ-ಬ್ಯಾಂಕಿಂಗ್ ವಿಚಾರಗಳಿಗೆ ಸಂಬಂ ಧಿಸಿದ ಸುಮಾರು ಮೂರು ಸಾವಿರ ಪಾರಿಭಾಷಿಕ ಪದಗಳಿಗೆ ಸಂವಾದಿಯಾದ ಕನ್ನಡ ಪದಗಳ ಜೊತೆಗೆ ಅವುಗಳ ವಿವರಣೆ ಗಳೂ ಇಲ್ಲಿವೆ. ಇದು ಒಂದು ಪದಕೋಶವಷ್ಟೇ ಅಲ್ಲ, ಬ್ಯಾಂಕಿಂಗ್ ವಿಷಯ ಕುರಿತ ಒಂದು ವಿಶ್ವಕೋಶ ಎನಿಸಿದೆ.

ಬ್ಯಾಂಕಿಂಗ್ ಕಮ್ಮಟ ಒಂದು ಆದರ್ಶ ತರಬೇತಿ ಕೇಂದ್ರವಾಗಿ ಪರಿಣಮಿಸಿದೆ. ಕಮ್ಮಟಿಗರದೇ ಒಂದು ವಿಶಿಷ್ಟ ಸಂಸ್ಕೃತಿ ರೂಪು ಗೊಂಡಿದೆ. ಒಂದು ಸಾರಿ ಕಮ್ಮಟಕ್ಕೆ ಬಂದವರು ಪದೇ ಪದೇ ಅದರಲ್ಲಿ ಭಾಗವಹಿಸಬಯಸುತ್ತಾರೆ. ಪ್ರತಿ ಕಮ್ಮಟದಲ್ಲೂ ಹೊಸತನ ಇರುತ್ತದೆ. ಮೊದಲ ಕಮ್ಮಟಕ್ಕೆ ಬಂದವರಲ್ಲಿ ಅನೇಕರು ಈ ಇಪ್ಪತ್ತೈದನೆಯ ಕಮ್ಮಟದಲ್ಲೂ ಪಾಲ್ಗೊಳ್ಳುತ್ತಿದ್ದಾರೆ.

ಕಮ್ಮಟದ ಇನ್ನೊಂದು ವೈಶಿಷ್ಟ್ಯವೆಂದರೆ, ಪ್ರತಿ ಕಮ್ಮಟ ದಲ್ಲೂ ಅದರಲ್ಲಿ ಭಾಗವಹಿಸಿದವರೆಲ್ಲರಿಗೂ ಆ ಕಮ್ಮಟದ ಕೊನೆಯ ದಿನ ಬಿರುದುಗಳ ಪ್ರದಾನ ಮಾಡುವುದು. ಹಾಸ್ಯಪೂರಿತವೂ ಅರ್ಥಗರ್ಭಿತವೂ ಆದ ಈ ಬಿರುದುಗಳು ಕಮ್ಮಟದ ಕೆಲಸದ ಆಯಾಸವನ್ನು ಬಹಳಮಟ್ಟಿಗೆ ಕಡಿಮೆ ಮಾಡಿ ಕಮ್ಮಟಿಗರು ಉಲ್ಲಾಸದಿಂದ ಕಮ್ಮಟವನ್ನು ಪದೇ ಪದೇ ನೆನೆದುಕೊಳ್ಳುವಂತೆ ಮಾಡುತ್ತವೆ.

ಕಮ್ಮಟದ ಇನ್ನೊಂದು ಉಪೋತ್ಪನ್ನವೆಂದರೆ, 'ಪದನಿಧಿ' ಎಂಬ ವ್ಯವಸ್ಥೆಯ ಯೋಜನೆ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹೊಸ ಹೊಸದಾಗಿ ಬರುವ ಪಾರಿಭಾಷಿಕ ಪದಗಳಿಗೆ ಕೂಡಲೇ ಕನ್ನಡ ಪದಗಳನ್ನು ಸೂಚಿಸುವ ನಿರಂತರ ವ್ಯವಸ್ಥೆ. ಕಮ್ಮಟದಲ್ಲಿ ಪಾಲ್ಗೊಂಡು ಸಾಕಷ್ಟು ನುರಿತಿರುವವರನ್ನೊಳಗೊಂಡ ಒಂದು ಸಮಿತಿ ಈ ಕೆಲಸ ನಿರ್ವಹಿಸುತ್ತಿದೆ, 'ಪದನಿಧಿ' ಎಂಬ ಅನಿಯತ ಕಾಲಿಕವನ್ನು ಇದಕ್ಕಾಗಿ ಹೊರಡಿಸಲಾಗುತ್ತಿದೆ.

ಬ್ಯಾಂಕಿಂಗ್ ಕಮ್ಮಟದ ಪಥದರ್ಶನ ಮಾಡಿದಾಗ ನಮಗೆ ಧನ್ಯತೆಯ ಭಾವ ಉಂಟಾಗುತ್ತದೆ. ಭಾರತದ ಬೇರೆ ಯಾವುದೇ ಭಾಷೆಯಲ್ಲಿ ಇಂಥ ಪ್ರಯೋಗ ನಡೆದದ್ದಿಲ್ಲ ಎಂದರೆ ಅದು ಅಹಂಕಾರದ ಮಾತಲ್ಲ. ಇಪ್ಪತ್ತೈದು ಕಮ್ಮಟಗಳನ್ನು ನಾವು ಹೇಗೆ ನಡಸಿದೆವು ಎಂದು ನಮಗೇ ಆಶ್ಚರ್ಯವಾಗುತ್ತದೆ. ಇನ್ನೂ ನಡೆಯಬೇಕಾದ ದೂರ ಬಹಳ ಇದೆ ಎನಿಸದೆಯೂ ಇರುವುದಿಲ್ಲ. ಇದುವರೆಗೆ ಕಮ್ಮಟವನ್ನು ನಡಸಿಕೊಂಡು ಬಂದ ಶಕ್ತಿಯೇ ಮುಂದೆಯೂ ಇದನ್ನು ನಡಸೀತು ಎಂಬುದು ನಮ್ಮ ಆಶಾವಾದ.



# ರಾಷ್ಟ್ರೀಯ ಮಹಿಳಾ ಕೋಶ
# ಒಂದು ಅಸಾಂಪ್ರದಾಯಿಕ ಉದರಿ ವ್ಯವಸ್ಥೆ

**ಕುಮುದ ರಾಮಾನುಜಂ**
ಆಯ್ಕೆ ಶ್ರೇಣಿ ಬೋಧಕರು, ವಾಣಿಜ್ಯ ಶಾಸ್ತ್ರ ವಿಭಾಗ
ಮಹಾರಾಣಿ ಮಹಿಳಾ ಕಲಾ ಕಾಲೇಜು, ಬೆಂಗಳೂರು

ಸಂಘಟಿತ ವಲಯದ ಹಣಕಾಸು ಸಂಸ್ಥೆಗಳು ಅಸಂಘಟಿತ ವಲಯದ ಬಡ ಮಹಿಳೆಯರಿಗೆ ಸಾಕಷ್ಟು ಉದರಿ ಸೌಲಭ್ಯಗಳನ್ನು ಒದಗಿಸುತ್ತಿಲ್ಲ. ಅವರಿಗಾಗಿ ಹೊಸ ಬಗೆಯ ಅರೆ-ಸಾಂಪ್ರದಾಯಿಕ ಉದರಿ ಸೌಲಭ್ಯವ್ಯವಸ್ಥೆಯನ್ನು ಒದಗಿಸಲು ಭಾರತ ಸರ್ಕಾರ ರಾಷ್ಟ್ರೀಯ ಮಹಿಳಾ ಕೋಶವನ್ನು ರಚಿಸಿದೆ.

ಭಾರತದ ರಾಷ್ಟ್ರೀಕೃತ ಬ್ಯಾಂಕುಗಳು, ಖಾಸಗಿ ಬ್ಯಾಂಕುಗಳು ಮತ್ತಿತರ ಹಣಕಾಸು ಸಂಸ್ಥೆಗಳು ಮಹಿಳಾ ಗ್ರಾಹಕರಿಗೆ ಪ್ರಾಮುಖ್ಯವನ್ನು ಕೊಟ್ಟಿಲ್ಲವೆಂಬುದು ಎಲ್ಲರಿಗೂ ತಿಳಿದ ಸಂಗತಿ. ಸಂಘಟಿತ ವಲಯದ ಬ್ಯಾಂಕುಗಳ ಈ ಧೋರಣೆಗೆ ಅನೇಕ ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದವು—ಮಹಿಳೆಯರ ಅನಕ್ಷರತೆ, ಕೌಶಲ ಹೀನತೆ, ವ್ಯವಹಾರಜ್ಞಾನಶೂನ್ಯತೆ, ದಾರಿದ್ರ್ಯ ಹಾಗೂ ಪರಾವಲಂಬಿ ಜೀವನ ಶೈಲಿ. ಭಾರತದಲ್ಲಿ ಮಹಿಳೆಯರ ಹೀನಸ್ಥಿತಿಗೆ ದಾರಿದ್ರ್ಯವೇ ಅತಿ ಮುಖ್ಯ ಕಾರಣವಾಗಿದೆ. ಮಹಿಳೆಯರ ಎಲ್ಲ ಸಮಸ್ಯೆಗಳಿಗೆ ಪರಿಹಾರವನ್ನೊದಗಿಸುವುದು ಸಂಘಟಿತ ವಲಯದ ಬ್ಯಾಂಕುಗಳ ಮತ್ತು ಹಣಕಾಸಿನ ಸಂಸ್ಥೆಗಳ ಕಾರ್ಯವ್ಯಾಪ್ತಿಯಲ್ಲಿಲ್ಲ. ಎಲ್ಲ ವಲಯದ ಬ್ಯಾಂಕುಗಳ ಪ್ರಧಾನ ಕಾರ್ಯಗಳಲ್ಲಿ ಬಹು ಮುಖ್ಯವಾದವು ಠೇವಣಿ ಸಂಗ್ರಹಣೆ ಹಾಗೂ ಉತ್ಪಾದನೆಗಾಗಿ ಉದರಿ ಒದಗಣೆ. ಈಚೆಗೆ ಭಾರಿ ಬ್ಯಾಂಕುಗಳು ತಮ್ಮವೇ ಉಪಾಂಗಗಳ ಮೂಲಕ ಆಧುನಿಕ ವಾಣಿಜ್ಯ ಮತ್ತು ಉದ್ದಿಮೆಗಳಿಗೆ ಅಗತ್ಯವಿರುವ ವಣಿಕ ಬ್ಯಾಂಕಿಂಗ್, ಹೂಡಿಕೆ, ಅಭಿಕರಣ ಮತ್ತು ಭೋಗ್ಯದ ವಹಿವಾಟುಗಳಲ್ಲಿ ತೊಡಗಿವೆ. ಅನುಕೂಲಸ್ಥ ಗ್ರಾಹಕರಿಗೆ ಅನುಭೋಗಕ್ಕಾಗಿ ಉದರಿ ಕಾರ್ಡುಗಳು ಮತ್ತು ವೈಯಕ್ತಿಕ ಬ್ಯಾಂಕಿಂಗ್ ಸೌಲಭ್ಯಗಳನ್ನು ಕಲ್ಪಿಸಿವೆ. ಮೇಲಣ ವರ್ಗದವರ ಮನೆ ಬಾಗಿಲಿಗೆ ಸರಕುಗಳನ್ನು, ಸೇವೆಗಳನ್ನು ತಲುಪಿಸುವ ಏರ್ಪಾಟುಗಳು ನಡೆಯುತ್ತಿವೆ. ಸಮಾಜದ ಒಂದು ಕಿರು ಭಾಗದಲ್ಲಿ ಬ್ಯಾಂಕ್ ಸೇವೆಗಳ ಯಾಂತ್ರೀಕರಣ, ಗಣಕೀಕರಣದ ವೈಭವವನ್ನು ಕಾಣಬಹುದು. ಅದೇ ಸಮಾಜದ ಮತ್ತೊಂದು ಹಿರಿದಾದ ಭಾಗದಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು. ಸಾಮಾಜಿಕ ಬ್ಯಾಂಕಿಂಗ್ ವ್ಯವಸ್ಥೆಯ ಮೂಲಕ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ದಾರಿದ್ರ್ಯ ನಿರ್ಮೂಲನಕ್ಕೆ ಉದರಿಯನ್ನು ಒದಗಿಸಿ ಇಪ್ಪತ್ತೈದು ವರ್ಷಗಳು ಸಂದಿದ್ದರೂ ದಾರಿದ್ರ್ಯದ ಬೇರುಗಳನ್ನು ಹರಡುತ್ತಿರುವವರು ಭಾರತದ ದರಿದ್ರ ಮಹಿಳೆಯರು ಮತ್ತು ಮಿತಿಮೀರಿ ಬೆಳೆಯುತ್ತಿರುವ ಅವರ ಕುಟುಂಬಗಳು. ಹೀಗೆ ಅಸಮತೋಲದಿಂದ ಹದಗೆಟ್ಟಿರುವ ಆರ್ಥಿಕ ಪರಿಸ್ಥಿತಿಯಲ್ಲಿ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವುದು ಭಾರಿ ಸಮಸ್ಯೆಯಾಗಿದೆ. ಬ್ಯಾಂಕುಗಳನ್ನು ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಯ ಹರಿಕಾರರನ್ನಾಗಿ ಬಳಸಿ ದಾರಿದ್ರ್ಯದಲ್ಲಿ ನರಳುತ್ತಿರುವ ಮಹಿಳೆಯರಿಗೆ ಜೀವನೋಪಾಯಕ್ಕೆ ಮಾರ್ಗದರ್ಶನ ನೀಡಬೇಕಾಗಿದೆ. ಆದ್ದರಿಂದ ಬ್ಯಾಂಕುಗಳು ದರಿದ್ರ ಮಹಿಳೆಯರನ್ನು ತಮ್ಮ ಗ್ರಾಹಕರಾಗಿ ಸ್ವೀಕರಿಸಬೇಕಾಗಿದೆ. ಅಂದರೆ ಆ ಮಹಿಳೆಯರು ಬ್ಯಾಂಕಿನ ಠೇವಣಿದಾರರಾಗಬೇಕು ಮತ್ತು ಉದರಿ ಸೌಲಭ್ಯಕ್ಕೆ ಅರ್ಹರಾಗಲು ಲಾಭದಾಯಕವಾದ ವ್ಯವಹಾರ ಅಥವಾ ಉತ್ಪಾದನೆಯಲ್ಲಿ ತೊಡಗಿರಬೇಕು. ಹೀಗೆ ಮಹಿಳೆಯರು ಅಕ್ಷರಸ್ಥರಾಗಿ, ಕುಶಲಕರ್ಮಿಗಳಾಗಿ, ಸುಶಿಕ್ಷಿತರಾಗಿ, ಉದ್ಯೋಗಸ್ಥರಾದರೆ ದಾರಿದ್ರ್ಯದ ವಿಷವರ್ತುಲವನ್ನು ಭೇದಿಸಿ ಆರ್ಥಿಕವಾಗಿ ಮುನ್ನಡೆಯಬಹುದು.

ಭಾರತದ ಎಂಟನೆಯ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳೆ ಮತ್ತು ಶಿಶುಗಳ ಅಭಿವೃದ್ಧಿ ಹಾಗೂ ಕುಟುಂಬ ಕಲ್ಯಾಣದ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ವಿಶ್ವಬ್ಯಾಂಕಿನ ನೆರವಿನಿಂದಲೂ ಅನೇಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲಾಗಿದೆ. ಭಾರತಾದ್ಯಂತ ಗ್ರಾಮೀಣ ಜನರಿಗಾಗಿ ಮತ್ತು ಅನಕ್ಷರಸ್ಥರಿಗಾಗಿ ಅಕ್ಷರ ಕಲಿಕೆಯ ಕಾರ್ಯಕ್ರಮವನ್ನು ಸಾಂಪ್ರದಾಯಿಕ ಮತ್ತು ಅಸಾಂಪ್ರದಾಯಿಕ ವ್ಯವಸ್ಥೆಯ ಮೂಲಕ ಜಾರಿಗೊಳಿಸುತ್ತಿದ್ದಾರೆ. ರಾಷ್ಟ್ರೀಕೃತ ಬ್ಯಾಂಕುಗಳು, ಸರ್ಕಾರಿ ಇಲಾಖೆಗಳು ಮತ್ತು ಸರ್ಕಾರೇತರ ಸಂಸ್ಥೆಗಳು ತರಬೇತಿ ಕೇಂದ್ರಗಳನ್ನು

ತೆರೆದು ವಯಸ್ಕರಿಗೆ ಕುಶಲ ಕಾರ್ಯಗಳಲ್ಲಿ ತರಬೇತಿಯನ್ನು ನೀಡುತ್ತಿವೆ. ಅಕ್ಷರ ಕಲಿಕೆ ಮತ್ತು ವೃತ್ತಿ ತರಬೇತಿಯ ಕಾರ್ಯಕ್ರಮಗಳು ಧ್ಯೇಯ ಸಾಧನೆಯಲ್ಲಿ ಯಶಸ್ವಿಯಾದರೆ, ಫಲಾನುಭವಿಗಳನ್ನು ವ್ಯವಹಾರ ಅಥವಾ ಉತ್ಪಾದನೆಯಲ್ಲಿ ತೊಡಗಿಸಿ, ವೃತ್ತಿಯಲ್ಲಿ ಮುಂದುವರಿಯಲು ಉದರಿ ಸೌಲಭ್ಯವನ್ನು ಒದಗಿಸಬೇಕಾಗುತ್ತದೆ. ಅನಂತರ ಉದರಿಯ ಮರುಪಾವತಿಗೂ ಸೂಕ್ತವಾದ ಕಾರ್ಯಕ್ರಮವನ್ನು ರೂಪಿಸಬೇಕಾಗುತ್ತದೆ. ಹೀಗೆ ಮೂರು ಹಂತಗಳಲ್ಲಿ ಮಹಿಳೆಯರ ಆರ್ಥಿಕ ಪ್ರಗತಿಯನ್ನು ಸಾಧಿಸಲು ಮಾನಸಿಕ, ಸಾಂಸ್ಕೃತಿಕ, ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಬೆಂಬಲಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗಿದೆ. ಈ ಎಲ್ಲ ಕ್ಷೇತ್ರಗಳ ಕಾರ್ಯಗಳನ್ನು ಒಂದಕ್ಕೊಂದು ಪೂರಕವಾಗಿ ನಡೆಸಿದರೆ ಮಹಿಳೆಯರ ಆರ್ಥಿಕಾಭಿವೃದ್ಧಿಯ ಶುಭಫಲವನ್ನು ಎಲ್ಲರೂ ಸವಿಯಬಹುದು. ನಮ್ಮ ಕೇಂದ್ರ ಸರ್ಕಾರ ಸಾಮಾಜಿಕ ಭದ್ರತೆ ಮತ್ತು ಕಲ್ಯಾಣ ಕಾರ್ಯಗಳಲ್ಲಿ ಮಹಿಳೆಯರ ಅಭಿವೃದ್ಧಿಗಾಗಿ ಯೋಜಿಸಿ ಜಾರಿಗೊಳಿಸಿರುವ ಅನೇಕ ಕಾರ್ಯಕ್ರಮಗಳು ಹೀಗಿವೆ:

### ಸಾಮಾಜಿಕ ಭದ್ರತೆ ಮತ್ತು ಕಲ್ಯಾಣ ಹಾಗೂ ಮಹಿಳೆ

ಈಚೆಗೆ ಭಾರತ ಸರ್ಕಾರ ಮಾನವ ಸಂಪನ್ಮೂಲದ ಅಭಿವೃದ್ಧಿಗಾಗಿ ಹಲವು ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸಿದೆ. ಆದರೂ ನಮ್ಮ ಸರ್ಕಾರವನ್ನು ಬಹುವಾಗಿ ಕಾಡುತ್ತಿರುವ ಸಮಸ್ಯೆಗಳು ಮಿತಿಮೀರಿ ಬೆಳೆಯುತ್ತಿರುವ ಜನಸಂಖ್ಯೆ ಮತ್ತು ಅದರ ಉತ್ಪಾದನ ಸಾಮರ್ಥ್ಯಹೀನತೆ — ಅಂದರೆ ಭಾರತದ ಪ್ರಜೆಗಳಲ್ಲಿ ಹರಡುತ್ತಿರುವ ನಿರುದ್ಯೋಗ, ದಾರಿದ್ರ್ಯ, ಅನಕ್ಷರತೆ ಮತ್ತು ಅನಾರೋಗ್ಯ—ಈ ಸಮಸ್ಯೆಗಳಿಗೆ ಪರಿಹಾರವನ್ನೊದಗಿಸಲು ಮಹಿಳಾಭಿವೃದ್ಧಿ ಕಾರ್ಯಗಳಿಗೆ ಪ್ರಾಮುಖ್ಯವನ್ನು ಕೊಡಲಾಗಿದೆ. ಸರ್ಕಾರದ ಆರ್ಥಿಕ ವರದಿಯಲ್ಲಿ ಜನಸಂಖ್ಯೆಯ ನಿಯಂತ್ರಣಕ್ಕಾಗಿ, ಕುಟುಂಬ ಯೋಜನೆ ಹಾಗೂ ಕಲ್ಯಾಣ ಕಾರ್ಯಕ್ರಮಗಳು, ಸಾಕ್ಷರತೆಯ ಕಾರ್ಯಕ್ರಮಗಳು ಮತ್ತು ನಿರುದ್ಯೋಗ ನಿವಾರಣಾ ಯೋಜನೆಗಳನ್ನು ಕುರಿತು ಮಾಹಿತಿಗಳನ್ನು ಒದಗಿಸಿದೆ. ಮಹಿಳಾ ಸಾಕ್ಷರತೆಯನ್ನು ಹೆಚ್ಚಿಸಿ, ಮದುವೆಯ ವಯಸ್ಸನ್ನು ಏರಿಸಿ, ಅವರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿ, ಸಮಾಜದಲ್ಲಿ ಮಹಿಳೆಯರ ಸ್ಥಾನವನ್ನು ಉತ್ತಮವಾಗಿಸುವುದರ ಮೂಲಕ ಜನಸಂಖ್ಯಾ ಸ್ಫೋಟವನ್ನು ನಿಯಂತ್ರಿಸಲು ಶ್ರಮಿಸುತ್ತಿದೆ. ಭಾರತದಲ್ಲಿ 1991ರಲ್ಲಿ ಒಟ್ಟು ಸಾಕ್ಷರತೆ ಶೇ. 52.21 ಇತ್ತು. ಅದರಲ್ಲಿ ಮಹಿಳೆಯರು ಶೇ. 39.29. ಅಂದರೆ ನಮ್ಮ ದೇಶದ ಮಹಿಳೆಯರಲ್ಲಿ ಶೇ. 71ರಷ್ಟು ಅನಕ್ಷರಸ್ಥರಿದ್ದಾರೆ. ಯುನೆಸ್ಕೊ ವರದಿಯ ಪ್ರಕಾರ ಒಂದು ದೇಶದ ಆರ್ಥಿಕ ಬೆಳವಣಿಗೆಗೆ ವಯಸ್ಕರ ಸಾಕ್ಷರತೆಯ ಮಟ್ಟ ಶೇ. 70ರಷ್ಟು ಆವಶ್ಯಕವಾಗಿರಬೇಕು. ನಮ್ಮ ದೇಶದ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಯಲ್ಲಿ ಶಿಕ್ಷಣ ಒಂದು ಪ್ರಮುಖವಾದ ನಿರ್ಧಾರಕ ಅಂಶವೆಂಬುದನ್ನು ಕುರಿತು ನಡೆಸಿದ ಅಧ್ಯಯನದ ಪ್ರಕಾರ ಮಹಿಳೆಯರ ಸಾಕ್ಷರತೆ ಹೆಚ್ಚಾದಂತೆ ಅವರಲ್ಲಿ ಗರ್ಭಧಾರಣೆ ಹಾಗೂ ತಾಯಿ ಮತ್ತು ಶಿಶುಗಳ ಮರಣದ ಸಂಖ್ಯೆ ಕಡಮೆಯಾಗಿರುವುದು ಕಂಡುಬಂದಿದೆ. ದೇಶದ ಪ್ರಾಥಮಿಕ ಶಾಲೆಗಳ ಅಧ್ಯಾಪಕರ ಹುದ್ದೆಗಳಲ್ಲಿ ಶೇ. 80ರಷ್ಟು ಅಧ್ಯಾಪಕಿಯರನ್ನು ಇನ್ನಾರು ವರ್ಷಗಳಲ್ಲಿ ನೇಮಿಸುವ ಯೋಜನೆ ಇದೆ.

1993ರ ವರದಿಯ ಪ್ರಕಾರ ಭಾರತದ 89.66 ಕೋಟಿ ಜನರಲ್ಲಿ ಶೇ. 40ರಷ್ಟು ಜನರು ಬಡತನದ ರೇಖೆಯ ಕೆಳಗೆ ಜೀವನ ನಡೆಸುತ್ತಿದ್ದಾರೆ. ಪ್ರತಿ ವ್ಯಕ್ತಿಯ ಪ್ರತಿ ದಿನದ ಕನಿಷ್ಠ ಜೀವನಾವಶ್ಯಕತೆಗಳನ್ನು ಪರಿಗಣಿಸಿ ಬಡತನದ ರೇಖೆಯನ್ನು ನಿಗದಿಸಿದೆ. ಅದರಂತೆ ಪ್ರತಿಯೊಬ್ಬನೂ ತಿಂಗಳೊಂದಕ್ಕೆ ತನಗಾಗಿ ಖರೀದಿಸುವ ಅನುಭೋಗ ಸರಕಿಗೆ ತಗಲುವ ಖರ್ಚನ್ನು ಆ ದೇಶದ ಬೆಲೆಗಳ ಮಟ್ಟದ ರೀತ್ಯ ನಿಗದಿಸಬೇಕು. 'ಅನುಭೋಗದ ಸಮುಚ್ಚಯದ ಮಟ್ಟವನ್ನು (ಶಿಷ್ಟ) ಕೆಲೋರಿಯ ಅಳತೆಯಲ್ಲಿ ಮಾಡಲಾಗುತ್ತದೆ. ಗ್ರಾಮೀಣ ವ್ಯಕ್ತಿಗೆ ಪ್ರತಿ ದಿನಕ್ಕೆ 2,400 ಮತ್ತು ನಗರವಾಸಿ 2.100—ಈ ಗುಣಮಟ್ಟದ ಆಹಾರದ ಖರೀದಿಗೆ ತಗಲುವ ವೆಚ್ಚದ ಪ್ರಕಾರ ಒಬ್ಬನ ಆದಾಯ ಬಡತನದ ರೇಖೆಯ ಮೇಲೆ ಮತ್ತು ಕೆಳಗಿದೆ ಎಂದು ನಿರ್ಧರಿಸಲಾಗುತ್ತದೆ. ನಮ್ಮ ದೇಶದಲ್ಲಿ ಸುಮಾರು 35 ಕೋಟಿ ಜನರು ಬಡತನದ ರೇಖೆಯ ಕೆಳಗೆ ಜೀವಿಸುತ್ತಿದ್ದಾರೆ. ಇದರಲ್ಲಿ ಮಹಿಳೆಯರ ಸಂಖ್ಯೆ ಅರ್ಧದಷ್ಟಿದೆ. ಹಣಕಾಸಿನ ಮತ್ತು ವ್ಯವಸ್ಥೆಯ ಕೊರತೆಗಳಿದ್ದರೂ ಸರ್ಕಾರ ಈ ಗುಂಪಿನವರ ಆರ್ಥಿಕ ಸ್ಥಿತಿಯನ್ನು ಉತ್ತಮವಾಗಿಸಲು ಸಾಮಾಜಿಕ ಭದ್ರತೆಯ ಕ್ರಮಗಳಲ್ಲಿ ಇವುಗಳಿಗೆ ಪ್ರಾಮುಖ್ಯವನ್ನು ಕೊಟ್ಟಿದೆ—ಮಹಿಳೆಯರ, ಮಕ್ಕಳ, ದುರ್ಬಲ ವರ್ಗದವರ, ಅಂಗವಿಕಲರ ಮತ್ತು ಅಂಗಹೀನರ ಅಭಿವೃದ್ಧಿಗಾಗಿ ಕಾರ್ಯಕ್ರಮಗಳು, ವಿಶೇಷವಾದ ಉದ್ಯೋಗಗಳು ಮತ್ತು ದಾರಿದ್ರ್ಯವನ್ನು ತಡೆಯುವಂಥ ಕಾರ್ಯಕ್ರಮಗಳು, ಸಾಮಾನ್ಯ ಅಭಿವೃದ್ಧಿ ಕಾರ್ಯಗಳಲ್ಲಿ ಮಹಿಳೆಯರನ್ನು ಮತ್ತು ಮಕ್ಕಳನ್ನು ವಿಶೇಷವಾಗಿ ಬೆಂಬಲಿಸುವಂಥ ಕಾರ್ಯಗಳನ್ನು ಉತ್ತೇಜಿಸುವುದು. ಉದ್ಯೋಗಗಳನ್ನು ಕುರಿತು ರಾಷ್ಟ್ರೀಯ ಅಭಿವೃದ್ಧಿ ಸಮಿತಿ ಮಾಡಿದ ಶಿಫಾರಸುಗಳಂತೆ ಸುಶಿಕ್ಷಿತ ಮಹಿಳೆಯರಿಗೆ ಉದ್ಯೋಗಾವಕಾಶ ಮತ್ತು ತರಬೇತಿ ಸೌಲಭ್ಯಗಳನ್ನು ಒದಗಿಸಬೇಕು. ಅವರ ಉದರಿ ಅಗತ್ಯಗಳನ್ನು ಪೂರೈಸಲು ಬ್ಯಾಂಕುಗಳಲ್ಲಿ ವಿಶೇಷವಾದ ಇಲಾಖೆಗಳನ್ನು ಅಥವಾ ಶಾಖೆಗಳನ್ನು ತೆರೆಯಬೇಕು ಮತ್ತು ಅವರ ಸ್ವ-ಉದ್ಯೋಗಗಳಿಗೆ ಒದಗಿಸುವ ಉದರಿಯ ಕನಿಷ್ಠ ಮಟ್ಟವನ್ನು ನಿಗದಿಸಬೇಕು.

ಭಾರತ ಸರ್ಕಾರ ಈಗಿನ ಪಂಚವಾರ್ಷಿಕ ಯೋಜನೆಯಲ್ಲಿ ಸಾಮಾಜಿಕ ಭದ್ರತೆ ಮತ್ತು ಕಲ್ಯಾಣ ಕಾರ್ಯಗಳಡಿಯಲ್ಲಿ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೊಳಿಸಿದೆ. ಮಹಿಳೆಯರ ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಮತ್ತು ಸ್ವಾವಲಂಬನೆಗಾಗಿ ಉದ್ಯೋಗಾವಕಾಶಗಳಲ್ಲಿ ಮತ್ತು

ಆದಾಯ ಕುದುರಿಸುವ ಕಾರ್ಯಗಳಲ್ಲಿ ಅವರಿಗೆ ಆದ್ಯತೆಯನ್ನು ಕೊಟ್ಟಿದೆ. ಅದರಂತೆ ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಗಳಲ್ಲಿ ಶೇ. 40 ಮತ್ತು ಜವಾಹರ್ ರೋಜಗಾರ್ ಯೋಜನೆಯಲ್ಲಿ ಶೇ. 30ನ್ನು ಮಹಿಳೆಯರಿಗಾಗಿ ತೆಗೆದಿರಿಸಿದೆ. ಉದ್ಯೋಗಸ್ಥ ಮಹಿಳೆಯರ ಸೌಕರ್ಯಕ್ಕಾಗಿ ಬೆಂಬಲಿಸುವ ಅನೇಕ ಯೋಜನೆಗಳನ್ನು ಜಾರಿಗೆ ತರಲಾಗಿದೆ. ಅವುಗಳಲ್ಲಿ ಮುಖ್ಯವಾದವು—ಉದ್ಯೋಗಸ್ಥ ಮಹಿಳೆಯರ ವಾಸದ ನಿಲಯಗಳು, ಶಿಶುವಿಹಾರಗಳು, ಬಾಲವಾಡಿಗಳು, ಉದ್ಯೋಗ ಮತ್ತು ತರಬೇತಿ ಒದಗಿಸುವ ಉತ್ಪಾದನ ಕೇಂದ್ರಗಳು ಇತ್ಯಾದಿ. ಮಹಿಳೆಯರ ಅಭಿವೃದ್ಧಿ ಮತ್ತು ಕಲ್ಯಾಣಕ್ಕಾಗಿ 1992ರಲ್ಲಿ "ರಾಷ್ಟ್ರೀಯ ಮಹಿಳಾ ಆಯೋಗ"ವನ್ನು ರಚಿಸಿದೆ. ಮಹಿಳೆಯರಿಗೆ ಸಂವಿಧಾನದಲ್ಲಿ ಮತ್ತು ಕಾನೂನಿನಲ್ಲಿರುವ ರಕ್ಷಣೆಗಳನ್ನು ಅಧ್ಯಯನ ಮಾಡಿ, ಮಹಿಳೆಯರನ್ನು ಕುರಿತು ಈಗಿರುವ ಕಾನೂನುಗಳನ್ನು ಅವಲೋಕಿಸಿ, ಅವರ ಹಕ್ಕುಗಳಿಗೆ ಧಕ್ಕೆ ತಂದಿರುವ ಸಂದರ್ಭಗಳನ್ನು ಪರಿಶೀಲಿಸಿ ಎಲ್ಲ ವಿಚಾರಗಳನ್ನೂ ವರದಿ ಮಾಡಲು ಈ ಆಯೋಗ ಕಾರ್ಯನಿರತವಾಗಿದೆ. ಮಹಿಳೆಯರ ಸ್ವ-ಉದ್ಯೋಗ ಘಟಕಗಳನ್ನು ಬೆಂಬಲಿಸಲು ಅಸಾಂಪ್ರದಾಯಿಕವಾಗಿ ಉದರಿಯನ್ನು ಒದಗಿಸಲು 1993ರಲ್ಲಿ "ರಾಷ್ಟ್ರೀಯ ಮಹಿಳಾ ಕೋಶ"ವನ್ನು ರಚಿಸಿದೆ. ಈ ಕೋಶದ ಮೂಲಕ 6 ವರ್ಷಗಳಲ್ಲಿ 2 ಲಕ್ಷ ಮಹಿಳೆಯರಿಗೆ ಉದರಿ ಸೇವೆಗಳನ್ನು ಒದಗಿಸಲು ಯೋಜಿಸಿದೆ. ಗ್ರಾಮೀಣ ಮಹಿಳೆಯರಲ್ಲಿ ಉಳಿತಾಯ ಮಾಡುವ ಅಭ್ಯಾಸವನ್ನು ಉತ್ತೇಜಿಸಲು ಮತ್ತು ಅವರ ಹಣಕಾಸಿನ ಆಸ್ತಿಗಳನ್ನು ಉತ್ತಮವಾಗಿಸಲು 1993ರಿಂದ "ಮಹಿಳಾ ಸಮೃದ್ಧಿ ಯೋಜನೆ"ಯನ್ನು ಜಾರಿಗೊಳಿಸಿದೆ. ಮಹಿಳೆಯರ ಸಾಮಾಜಿಕ ಪರಿಸರವನ್ನು ಉತ್ತಮಗೊಳಿಸಲು, ಲಿಂಗವನ್ನು ಕುರಿತು ಸೂಕ್ಷ್ಮತೆ ಮತ್ತು ಅರಿವನ್ನು ಮೂಡಿಸಲು ಯೋಜನೆಗಳನ್ನು ರೂಪಿಸಿ ಜಾರಿಗೆ ತರಲಾಗಿದೆ. ಮಹಿಳಾಭಿವೃದ್ಧಿಗಾಗಿ ನಮ್ಮ ಕೇಂದ್ರ ಸರ್ಕಾರದ ಕಾರ್ಯಕ್ರಮಗಳು ಮತ್ತು ಯೋಜನೆಗಳೆಲ್ಲ ಶ್ಲಾಘನೀಯವಾಗಿದ್ದರೂ ಅವು ಕುಂದು ಕೊರತೆಗಳಿಂದ ಮುಕ್ತವಾಗಿಲ್ಲ. ಈಗಲೂ ಖಾಸಗಿ ವಲಯ ಮತ್ತು ಸರ್ಕಾರಿ ವಲಯದ ವಾಣಿಜ್ಯ ಬ್ಯಾಂಕುಗಳು ಮಹಿಳೆಯರನ್ನು ಮತ್ತು ಅವರ ಮಾಲೀಕತ್ವದಲ್ಲಿರುವ ಸಂಸ್ಥೆಗಳನ್ನು ತಮ್ಮ ಉದರಿ ನೀಡಿಕೆ ಹಾಗೂ ವಿನಿಯೋಜನೆಯ ಕಾರ್ಯಗಳಿಗೆ ಯೋಗ್ಯ ಗ್ರಾಹಕರೆಂದು ಪರಿಗಣಿಸುತ್ತಿಲ್ಲ. ಮಹಿಳೆಯರಿಗಾಗಿಯೇ ರಚಿಸಿರುವ 'ರಾಷ್ಟ್ರೀಯ ಮಹಿಳಾ ಕೋಶ'ದ ವಿವರಗಳು ಹೀಗಿವೆ :

### ರಾಷ್ಟ್ರೀಯ ಮಹಿಳಾ ಕೋಶ

ಸಂಘಟಿತ ವಲಯದ ಹಣಕಾಸು ಸಂಸ್ಥೆಗಳು ಅಸಂಘಟಿತ ವಲಯದ ಬಡ ಮಹಿಳೆಯರಿಗೆ ಉದರಿ ಸೌಲಭ್ಯಗಳನ್ನು ಒದಗಿಸದಿರುವುದರಿಂದ, ಅವರಿಗಾಗಿ ಒಂದು ಹೊಸ ಬಗೆಯ ಅರೆ ಅಸಾಂಪ್ರದಾಯಿಕ ಉದರಿ ಸೌಲಭ್ಯದ ವ್ಯವಸ್ಥೆಯನ್ನು ಸರ್ಕಾರ ಒದಗಿಸಲು "ರಾಷ್ಟ್ರೀಯ ಮಹಿಳಾಕೋಶ"ವನ್ನು 1993ರಲ್ಲಿ ರಚಿಸಿದೆ. ಈ ಕೋಶದ ವಿಶೇಷ ಲಕ್ಷಣಗಳು ಹೀಗಿವೆ :

(ಅ) ಅಸಾಂಪ್ರದಾಯಿಕ ಉದರಿ ವ್ಯವಸ್ಥೆ ಗ್ರಾಹಕರ ಪರವಾಗಿರುತ್ತದೆ.

(ಆ) ಅಲ್ಲಿನ ಕಾರ್ಯ ರೀತಿಗಳು ಸರಳವಾಗಿ ಕನಿಷ್ಠವಾಗಿರುತ್ತದೆ.

(ಇ) ಉದರಿಯನ್ನು ಶೀಘ್ರವಾಗಿ ಹಾಗೂ ಪದೇ ಪದೇ ಒದಗಿಸುತ್ತದೆ.

(ಈ) ಉದರಿ ಮರುಪಾವತಿಯಲ್ಲಿ ನಮ್ಯತೆ ಇರುತ್ತದೆ.

(ಉ) ಉದರಿ ಸೌಲಭ್ಯದ ಜತೆಗೆ ಉಳಿತಾಯ ಮತ್ತು ವಿಂತವ್ಯಯದ ಯೋಜನೆ ಇರುತ್ತದೆ.

(ಊ) ಸಾಲಗಾರರಿಗೂ ಸಾಲ ನೀಡುವವರಿಗೂ ಈ ವಹಿವಾಟುಗಳ ವೆಚ್ಚಗಳು ಕನಿಷ್ಠವಾಗಿರುತ್ತವೆ.

ಈ ಎಲ್ಲ ಅಂಶಗಳಿಗೆ ರಾಷ್ಟ್ರೀಯ ಮಹಿಳಾ ಕೋಶ ತನ್ನ ಕಾರ್ಯಾಚರಣೆಯಲ್ಲಿ ಪ್ರಾಮುಖ್ಯವನ್ನು ಕೊಟ್ಟರೆ, ಕೋಶ ಭಾರತದ ನಾರಿಯರಿಗೊಂದು ವರದಾನವಾಗಲು ಸಾಧ್ಯ. ಈ ಕೋಶದ ವಿಶೇಷತೆಯನ್ನರಿಯಲು ಅದರ ಧ್ಯೇಯಗಳು, ಉದ್ದೇಶಗಳು ಮತ್ತು ಕಾರ್ಯಗಳನ್ನು ತಿಳಿಯಬೇಕು. ಈ ಮೂಲಕ ಭಾರತದ ಮಹಿಳೆಯರ ದಾರಿದ್ರ್ಯವನ್ನು ನಿವಾರಿಸಲು ಸಾಧ್ಯವೇ ಅಥವಾ ಬೇರೆ ಪೂರಕ ಸೇವೆಗಳ ಅಗತ್ಯವಿರುವುದೇ ಎಂಬುದನ್ನು ನಾವು ಪರಿಶೀಲಿಸಿ ತಿಳಿಯಬಹುದು.

### ಕೋಶದ ಧ್ಯೇಯಗಳು ಮತ್ತು ಉದ್ದೇಶಗಳು

1 ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಹಾಗೂ ಅಭಿವೃದ್ಧಿಗಾಗಿ ಕಾರ್ಯಗಳನ್ನು ಕೈಗೊಂಡು ಉತ್ತೇಜಿಸಲು ಉದರಿ ನೀಡಿಕೆಯನ್ನು ಸಾಧನವಾಗಿ ಬಳಸುವುದು. ಮಹಿಳಾಭಿವೃದ್ಧಿಗಾಗಿ ಹಣಕಾಸಿನ ಮತ್ತು ಸಾಮಾಜಿಕ ಅಭಿವೃದ್ಧಿಯ ಸೇವೆಗಳ ಸಂವೇಷ್ಟನವನ್ನು ಒದಗಿಸುವುದು.

2 ಮಹಿಳೆಯರ ಅಗತ್ಯಕ್ಕೆ ತಕ್ಕಂತೆ ಉದರಿ ಸೌಲಭ್ಯಗಳ ಉತ್ತಮ ಯೋಜನೆಗಳನ್ನು ರೂಪಿಸಿ ಅವುಗಳಿಗೆ ಬೆಂಬಲ ನೀಡುವುದು. ಅವರು ತೊಡಗಿರುವ ಉದ್ಯೋಗದಲ್ಲಿ ಮುಂದುವರಿಯಲು, ಮತ್ತಷ್ಟು ಉದ್ಯೋಗಗಳನ್ನು ಸೃಷ್ಟಿಸಲು, ಆಸ್ತಿಗಳನ್ನು ಸೃಷ್ಟಿಸಲು ಮತ್ತು ಮಾರಿ ಹಣ ಗಳಿಸಲು ಸಾಮಾಜಿಕ ಮತ್ತು ಆನುಷಂಗಿಕ ಅಗತ್ಯಗಳಿಗೆ ಹಾಗೂ ಅನುಭೋಗಕ್ಕೆ ಉದರಿ ಸೌಲಭ್ಯಗಳನ್ನು ಒದಗಿಸುವುದು.

3 ಉದರಿ ಸೌಲಭ್ಯಗಳನ್ನು ಪರಿಣಾಮಕಾರಿಯಾಗಿ ಬಳಸಿ ಸ್ವಾವಲಂಬಿಗಳಾಗಲು ಹೇಗೆ ಸಾಧ್ಯವೆಂಬುದನ್ನು ಪ್ರದರ್ಶಿಸಲು ಮಹಿಳಾ ಸಂಘಟನೆಗಳು ಕೋಶದ ಕಾರ್ಯಗಳಲ್ಲಿ ಹೇಗೆ ಭಾಗವಹಿಸಬಹುದೆಂದು ತೋರಿಸುವುದು.

4 ದರಿದ್ರ ಮಹಿಳೆಯರಿಗೆ ಉದರಿ ಮತ್ತಿತರ ಸಾಮಾಜಿಕಸೇವೆ ಗಳನ್ನೊದಗಿಸಲು ಸ್ವಯಂಸೇವೆಯ ಮತ್ತು ಸಾಂಪ್ರದಾಯಿಕ ವಲಯಗಳಲ್ಲಿ ಹೊಸ ವಿಧಾನಗಳ ಪ್ರಯೋಗಕ್ಕೆ ಉತ್ತೇಜನ ಹಾಗೂ ಬೆಂಬಲ ನೀಡುವುದು.

5 ಸಾಂಪ್ರದಾಯಿಕ ಸಂಸ್ಥೆಗಳು ದರಿದ್ರ ಮಹಿಳೆಯರನ್ನು ತಮ್ಮ ಲಾಭದಾಯಕ ಗ್ರಾಹಕರೆಂದೆಣಿಸಿ ಪ್ರಾಮುಖ್ಯವನ್ನು ಕೊಡಲು ಸರ್ಕಾರದ ಉದರಿ ವ್ಯವಸ್ಥೆಯನ್ನು ಹೆಚ್ಚು ಸೂಕ್ಷ್ಮ ಗೊಳಿಸುವುದು.

6 ಉದರಿ ಸೌಲಭ್ಯ ಮತ್ತದರ ನಿರ್ವಹಣೆಯನ್ನು ಕುರಿತು ಸಂಶೋಧನೆ, ಅಧ್ಯಯನ, ದಾಖಲೆಗಳ ತಯಾರಿಕೆ ಹಾಗೂ ವಿಶ್ಲೇಷ ಣೆಯ ಕಾರ್ಯಗಳಿಗೆ ಅರ್ಹರಾದವರನ್ನು ಆಯ್ಕೆಮಾಡಿ ವಿದ್ಯಾರ್ಥಿ ವೇತನದ ಮೂಲಕ ಉತ್ತೇಜಿಸುವುದು. ಉದರಿ ಒದಗಣೆ ಮತ್ತು ನಿರ್ವಹಣೆಯ ವಿವಿಧ ಹಂತಗಳಲ್ಲಿ ಯಶಸ್ವಿಯಾಗಿರುವ ವಿಧಾನ ಗಳನ್ನು ಸಂಸ್ಥೆಗಳ ಅನುಭವದಿಂದ ತಿಳಿದು ಆ ವಿಧಾನಗಳನ್ನು ಹಣ ಕಾಸಿನ ಸಂಸ್ಥೆಗಳಿಗೆ ತಿಳಿಸುವುದು.

7 ಈ ಕ್ಷೇತ್ರದ ಅನುಭವಗಳನ್ನು ಮತ್ತು ಮಾಹಿತಿಗಳನ್ನು ಹಂಚಿಕೊಳ್ಳಲು ಹಾಗೂ ಪ್ರತಿಕ್ರಿಯೆಯ ನಿರ್ವಹಣೆ ಮತ್ತು ಸಾಮಾಜಿಕ ಚಾಲನೆಯಲ್ಲಿ ಕೌಶಲವನ್ನು ಗಳಿಸಲು ಮಹಿಳೆಯರ ಸಂಘಟನೆಗಳ ಜಾಲವನ್ನು ನಿರ್ಮಿಸಿ, ಒಕ್ಕೂಟವನ್ನು ರಚಿಸಲು ಉತ್ತೇಜಿಸುವುದು.

8 ಮಹಿಳಾ ಉದ್ಯಮಿಗಳ ಕೌಶಲವನ್ನು ಹೆಚ್ಚಿಸಲು ಉತ್ತೇ ಜನ ಮತ್ತು ಬೆಂಬಲ ನೀಡುವುದು.

9 ಕೋಶದ ಉದ್ದೇಶಗಳ ಸಫಲತೆಗಾಗಿ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು, ಕೇಂದ್ರಾಡಳಿತದಲ್ಲಿರುವ ಪ್ರದೇಶಗಳು, ಉದರಿ ಸಂಸ್ಥೆಗಳು, ಕೈಗಾರಿಕೆ ಮತ್ತು ವಾಣಿಜ್ಯ ಘಟಕಗಳು, ಸರ್ಕಾರೇತರ ಸಂಸ್ಥೆಗಳು, ಸ್ವಯಂಸೇವಾ ಸಂಸ್ಥೆಗಳು ಮತ್ತಿತರ ಸಂಸ್ಥೆಗಳ ಸಹಕಾರ ಕೋರಿ ಅವುಗಳ ಜತೆ ಕಾರ್ಯ ನಿರ್ವಹಿಸಲು ಸಹಕರಿಸುವುದು.

10 ಕೋಶದ ಧ್ಯೇಯೋದ್ದೇಶಗಳಿಗೆ ಧಕ್ಕೆ ಬಾರದಂತೆ ಇತರ ಸಂಸ್ಥೆಗಳಿಂದ ವಂತಿಗೆಗಳು, ಅನುದಾನಗಳು, ಕೊಡುಗೆಗಳು, ದಾನ ಗಳು, ಸಾಲಗಳು, ಖಾತ್ರಿಗಳು, ಉಡುಗೊರೆಗಳು ಇತ್ಯಾದಿಗಳನ್ನು ಸ್ವೀಕರಿಸುವುದು.

11 ಕೋಶದ ಉದ್ದೇಶಗಳ ಸಫಲತೆಗಾಗಿ ಅಗತ್ಯವಿರುವ ಎಲ್ಲ ರೀತಿಯ ವಿಧ್ಯುಕ್ತವಾದ ಕಾರ್ಯಗಳನ್ನು ಕೈಗೊಳ್ಳುವುದು.

**ಕೋಶದ ಕಾರ್ಯಗಳು**

1 ಮಹಿಳೆಯರ ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಕೋಶವು ಶ್ರಮಿ ಸುತ್ತದೆ. ದರಿದ್ರ ಮಹಿಳೆಯರ ಅಗತ್ಯಗಳನ್ನು ಪೂರೈಸಲು ಹಾಗೂ ಅವರ ಸಮಗ್ರ ಅಭಿವೃದ್ಧಿಗಾಗಿ ವಿವಿಧ ರೀತಿಯ ಉದರಿಯನ್ನು ಒದಗಿಸುವಾಗ ಉತ್ಪಾದನೆ ಮತ್ತು ಆರ್ಥಿಕ ಚಟುವಟಿಕೆಗೆ ಸಂಬಂಧ ಕಲ್ಪಿಸಲಾಗುತ್ತದೆ.

2 ಬಡ ಮಹಿಳೆಯರಿಗಾಗಿ ಯುಕ್ತವಾದ ವ್ಯವಸ್ಥೆಗಳನ್ನು ರೂಪಿಸಲು, ಹೊಸ ಯೋಜನೆಗಳನ್ನು ಪ್ರಯೋಗಿಸಲು ಸೌಲಭ್ಯ ಗಳ ಮೂಲಕ ಪರಿಸರವನ್ನು ಸೃಷ್ಟಿಸುವುದು.

3 ಸಾಂಪ್ರದಾಯಿಕ ವ್ಯವಸ್ಥೆಯಲ್ಲಿರುವ ಅಡೆತಡೆಗಳನ್ನು ಗುರುತಿಸಿ ನಿವಾರಿಸಲು, ಅನೇಕ ಚಟುವಟಿಕೆಗಳಲ್ಲಿ ಭಾಗವಹಿಸಿ ವಿಶ್ಲೇಷಿಸಿ ಸೂಕ್ತವಾದ ನೀತಿಗಳನ್ನು, ಕಾಯಿದೆಗಳನ್ನು, ಕಾರ್ಯ ಗಳನ್ನು ರೂಪಿಸಲು, ಸಂಶೋಧನೆಯ ಮೂಲಕ ಇರುವ ಸಾಧ್ಯತೆ ಗಳನ್ನು ತಿಳಿಯುವುದು.

4 ದಾರಿದ್ರ್ಯ ಮತ್ತು ಅಧಿಕಾರಶೂನ್ಯತೆಯಿಂದ ಉದ್ಭವಿಸಿ ರುವ ಸಂಕೀರ್ಣವಾದ ಸಮಸ್ಯೆಗಳನ್ನು ಹಾಗೂ ಇತರ ತಿರಸ್ಕಾರ ಗಳನ್ನು ಮಹಿಳೆಯರು ಬಗೆಹರಿಸಲು ಪ್ರಚಲಿತ ಸೇವೆ ಮತ್ತು ಯೋಜನೆಗಳನ್ನು ಕಾರ್ಯಗತವಾಗಿಸಲು ಆರ್ಥಿಕ ಮತ್ತು ಸಾಮಾ ಜಿಕ ಕ್ಷೇತ್ರದಲ್ಲಿ ಬೆಂಬಲಿಸುವ ಸೇವೆಗಳನ್ನು ಒದಗಿಸುವುದು.

5 ನಿರ್ಧಾರಗಳನ್ನು ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಮಹಿಳೆ ಯರು ಪರಿಣಾಮಕಾರಿಯಾಗಿ ಭಾಗವಹಿಸಲು ಗ್ರಾಮೀಣ ಮಟ್ಟ ದಲ್ಲಿ ಸಂಘಗಳನ್ನು, ಸಂಸ್ಥೆಗಳನ್ನು ಮತ್ತಿತರ ಭಾಗವಹಿಸುವ ಸಂಘ ಟನೆಗಳನ್ನು ರಚಿಸಿ ಬೆಂಬಲಿಸುವುದು.

6 ಉದರಿಯನ್ನು ಒದಗಿಸುವಾಗ ಉದರಿ ನಿರ್ವಹಣೆಯ ಶಿಕ್ಷಣ, ಅಕ್ಷರ ಕಲಿಕೆ, ಕೌಶಲಗಳ ತರಬೇತಿ, ತಂಡಗಳ ಸ್ವನಿರ್ವಹ ಣೆಗೆ ನಾಯಕತ್ವದ ತರಬೇತಿ ಇತ್ಯಾದಿ ಶಿಕ್ಷಣಗಳನ್ನು ಒದಗಿಸು ವುದು.

7 ಬಡ ಮಹಿಳೆಯರ ವಸತಿಗಳ ಬಳಿ ಉದರಿ ಕೇಂದ್ರಗಳನ್ನು ತೆರೆದು, ಕಾರ್ಯರೀತಿಗಳನ್ನು ಸರಳೀಕರಿಸಿ, ಸಾಲಗಳ ಪಾವತಿ ಮತ್ತು ಮರುಪಾವತಿ ಕ್ರಮಗಳಲ್ಲಿ ನಮ್ಯತೆಯನ್ನು ಹೆಚ್ಚಿಸಿ, ಉದರಿಯ ಬಳಕೆಯನ್ನು ಉತ್ತಮವಾಗಿಸುವ ಕ್ರಮಗಳನ್ನು ಕೈಗೊಳ್ಳುವುದು.

8 ಬಡ ಮಹಿಳೆಯರ ಕೆಲಸ ಮತ್ತು ವ್ಯಕ್ತಿಗಳ ವೈವಿಧ್ಯ ಹಾಗೂ ಋತುಮಾನಗಳನ್ನು ಪರಿಗಣಿಸಿ ಪ್ರತಿಯೊಬ್ಬರ ಅಗತ್ಯ ಗಳಿಗೆ ತಕ್ಕಂತೆ ಸಾಕಷ್ಟು ಉದರಿಯನ್ನು ಸಕಾಲದಲ್ಲಿ ಒದಗಿಸಿ ನಮ್ಯತೆಯನ್ನು ಸಾಧಿಸುವುದು.

9 ದರಿದ್ರ ಮಹಿಳೆಯರ ವೈಯಕ್ತಿಕ ಆದ್ಯತೆಗಳು ಮತ್ತು ಕೊರತೆಗಳಿಗೆ ತಕ್ಕಂತೆ ಬ್ಯಾಂಕು/ಉದರಿ ವ್ಯವಸ್ಥೆಗಳ ಕಾರ್ಯರೀತಿ ಗಳನ್ನು ಹೊಂದಿಸಲು ಈ ಸಂಸ್ಥೆಗಳ ಮತ್ತು ಮಹಿಳೆಯರ ನಡುವೆ ಪರಿಣಾಮಕಾರಿಯಾದ ಸಂವಹನ ಮಾರ್ಗಗಳನ್ನು ಅಭಿವೃದ್ಧಿಪಡಿ ಸುವುದು.

10 ಸಾಂಪ್ರದಾಯಿಕ ವ್ಯವಸ್ಥೆಯನ್ನು ಉತ್ತಮಗೊಳಿಸಲು ಮೇಲೆ ತಿಳಿಸಿರುವ ಎಲ್ಲ ಅಂಶಗಳನ್ನೊಳಗೊಂಡಂತೆ ನೀತಿಯನ್ನು ರೂಪಿಸಿ ಜಾರಿಗೆ ತರಲು ಅಗತ್ಯವಾದುದನ್ನು ಮಾಡುವುದು. ಹಾಗೂ ಸರಳವಾದ ನೂತನ ವ್ಯವಸ್ಥೆಗಳನ್ನು ಬೆಂಬಲಿಸುವುದು. ಬಡವರಿಗೆ ನೆರವನ್ನು ಕುರಿತು ಸಾಮಾಜಿಕ ವೆಚ್ಚಗಳ ಆಲೋಚನೆ ಗಳನ್ನು ನವೀಕರಿಸುವುದು.

11 ಸೇವಾಕ್ಷೇತ್ರವನ್ನು ವಿಸ್ತರಿಸಿ ಸೇವೆಗಳನ್ನು ಹೆಚ್ಚಿಸಲು, ಕ್ಷೇತ್ರಗಳನ್ನು ಮತ್ತು ಕಾರ್ಯಗಳನ್ನು ಗುರುತಿಸಿ ಸಂಪನ್ಮೂಲಗಳನ್ನಾಧರಿಸಿ ತರಬೇತಿ ನೀಡಲು, ಕಾರ್ಯಕ್ರಮಗಳನ್ನು ರೂಪಿಸಲು ಪ್ರಾದೇಶಿಕ ಮಟ್ಟದಲ್ಲಿ ಅಗತ್ಯಗಳ ಮೌಲ್ಯೀಕರಣ ಮಾಡುವುದು.

12 ಬಡ ಮಹಿಳೆಯರಿಗೆ ಉದರಿ ಸೌಲಭ್ಯವನ್ನು ಕುರಿತು ಸರ್ಕಾರಿ ನಿಯೋಗಿ ಸಂಸ್ಥೆಗಳಿಗೆ ಮತ್ತು ಸರ್ಕಾರೇತರ ವಲಯಗಳಿಗೆ ಮಾಹಿತಿಗಳನ್ನು ಒದಗಿಸಲು ಮತ್ತು ಹಿಂದಿನ ಅನುಭವಗಳನ್ನು ತಿಳಿಸಲು ಒಳ್ಳೆಯ ಮಾಹಿತಿ ವ್ಯವಸ್ಥೆಯನ್ನು ರೂಪಿಸಿ ಸ್ಥಾಪಿಸುವುದು.

13 ಸರ್ಕಾರಿ ಮತ್ತು ಸರ್ಕಾರೇತರ ಅಭಿವೃದ್ಧಿ ನಿಯೋಗಿ ಸಂಸ್ಥೆಗಳಿಂದ, ಸಾರ್ವಜನಿಕ ಮತ್ತು ಖಾಸಗಿ ದೇಣಿಗೆದಾರರಿಂದ ಮತ್ತು ವಿವಿಧ ಮಟ್ಟದ ಸರ್ಕಾರಗಳಿಂದ ಲಭ್ಯವಿರುವ ಸಂಪನ್ಮೂಲಗಳನ್ನು ಸಂಗ್ರಹಿಸಿ ವಿನಿಯೋಜನೆಗೆ ಬಳಸುವುದು. ಸ್ವಯಂಸೇವಾ ಸಂಸ್ಥೆಗಳನ್ನು ಈ ನಿಟ್ಟಿನಲ್ಲಿ ತೊಡಗುವಂತೆ ಮಾಡುವುದು.

14 ಮಹಿಳೆಯರ ಕಲ್ಯಾಣಕ್ಕಾಗಿ ಶ್ರಮಿಸುತ್ತಿರುವ ಇತರ ಉದರಿ ಮತ್ತು ಅಭಿವೃದ್ಧಿಯ ನಿಯೋಗಿ ಸಂಸ್ಥೆಗಳೊಂದಿಗೆ ಸಮನ್ವಯ ಸಾಧಿಸುವುದು. ಕೋಶದಂತೆ ಸೇವೆಸಲ್ಲಿಸುತ್ತಿರುವ ಸಂಸ್ಥೆಗಳಲ್ಲಿ ವಂತಿಗೆಯ ಮೂಲಕ ಸದಸ್ಯತ್ವವನ್ನು ಗಳಿಸುವುದು ಮತ್ತು ಅವರ ಕಾರ್ಯಗಳಲ್ಲಿ ಸಹಕರಿಸುವುದು.

15 ಮಹಿಳೆಯರ ಆರ್ಥಿಕಾಭಿವೃದ್ಧಿಗಾಗಿ ಶ್ರಮಿಸುತ್ತಿರುವವರಿಗೆ ಹಾಗೂ ಸಂಘ ಸಂಸ್ಥೆಗಳಿಗೆ ಧನಸಹಾಯ ಮತ್ತಿತರ ನೆರವುಗಳನ್ನು ಒದಗಿಸುವುದು. ಬ್ಯಾಂಕುಗಳಿಗೆ, ವ್ಯಕ್ತಿಗಳಿಗೆ, ಸಂಘಟನೆಗಳಿಗೆ ಮತ್ತು ಸಂಸ್ಥೆಗಳಿಗೆ ಸಾಲಗಳನ್ನು, ಖಾತ್ರಿಗಳನ್ನು ಒದಗಿಸುವುದು.

16 ಕೋಶವು ತನ್ನ ಉದ್ದೇಶಗಳ ಸಫಲತೆಗಾಗಿ ಕೆಳಗಿನ ವಹಿವಾಟುಗಳನ್ನು ನಡೆಸಬಹುದು :

(ಅ) ಅಗತ್ಯವಿರುವ ಹಣಕಾಸುಗಳನ್ನು ಸಾಲವಾಗಿ ಪಡೆಯಬಹುದು.

(ಆ) ಅನುದಾನಗಳನ್ನು, ಕೊಡುಗೆಗಳನ್ನು ಮತ್ತು ವಂತಿಗೆಗಳನ್ನು ಸ್ವೀಕರಿಸಬಹುದು ಹಾಗೂ ನೀಡಬಹುದು.

(ಇ) ಬಾಂಡ್‌ಗಳು, ಸಾಲಪತ್ರಗಳು, ಹುಂಡಿಗಳು, ವಚನ ಪತ್ರಗಳು, ಇತರ ಪ್ರತಿಭೂತಿಗಳನ್ನು ಮಾರಿ ಪಾವತಿಯನ್ನು ಸಂಗ್ರಹಿಸಬಹುದು ಹಾಗೂ ಸಾಲ ಮತ್ತು ಪ್ರತಿಭೂತಿಗಳನ್ನು ಖರೀದಿಸಬಹುದು, ಮರುಪಾವತಿಯನ್ನು ಮಾಡಬಹುದು.

(ಈ) ಅಗತ್ಯವಿರುವ ಚರಾಚರ ಆಸ್ತಿಗಳನ್ನು ತಾತ್ಕಾಲಿಕವಾಗಿ ಅಥವಾ ಖಾಯಂ ಆಗಿ ಬಾಡಿಗೆಗೆ ಅಥವಾ ಭೋಗ್ಯಕ್ಕೆ ಪಡೆಯಬಹುದು, ಖರೀದಿಸಬಹುದು ಅಥವಾ ಉಡುಗೊರೆಯಾಗಿ ಸ್ವೀಕರಿಸಬಹುದು.

17 ಕೋಶದ ಉದ್ದೇಶಗಳನ್ನು ಭಾಗಶಃ ಅಥವಾ ಪೂರ್ಣವಾಗಿ ಸಾಧಿಸಲು ಅವಶ್ಯಕವಾಗಿರುವ ಎಲ್ಲ ಕಾರ್ಯಗಳನ್ನು ಕೈಗೊಳ್ಳಬಹುದು ಮತ್ತಿತರ ಆನುಷಂಗಿಕ ಕಾರ್ಯಗಳನ್ನು ನಡೆಸಬಹುದು.

### ಆಡಳಿತ ಮಂಡಲಿ

ರಾಷ್ಟ್ರೀಯ ಮಹಿಳಾ ಕೋಶದ ಕಾರ್ಯಗಳನ್ನು ನಿರ್ದೇಶಿಸಿ ಪೂರೈಸಲು 15 ಸದಸ್ಯರನ್ನೊಳಗೊಂಡ ಆಡಳಿತ ಮಂಡಲಿಯ ರಚನೆಯು ಹೀಗಿರುತ್ತದೆ :

ಭಾರತ ಸರ್ಕಾರದ ಮಹಿಳೆ ಮತ್ತು ಶಿಶುಗಳ ಅಭಿವೃದ್ಧಿ ವಿಭಾಗದ ರಾಜ್ಯಮಂತ್ರಿಯು ಕೋಶದ ಅಧ್ಯಕ್ಷರಾಗಿದ್ದು ಅವರ ಅಧೀನದಲ್ಲಿ 14 ಸದಸ್ಯರಿರುತ್ತಾರೆ. ಇದೇ ವಿಭಾಗ ಒಬ್ಬ ನಗರಾಭಿವೃದ್ಧಿ ಸಚಿವಾಲಯ ಕಾರ್ಯದರ್ಶಿ ಮತ್ತು ಗ್ರಾಮೀಣಾಭಿವೃದ್ಧಿ ಸಚಿವಾಲಯ, ಯೋಜನಾ ಆಯೋಗ, ಬ್ಯಾಂಕಿಂಗ್ ವಿಭಾಗಗಳಿಂದ ತಲಾ ಒಬ್ಬ ಕಾರ್ಯದರ್ಶಿಯನ್ನು ಸದಸ್ಯನಾಗಿ ನೇಮಿಸಲಾಗಿದೆ. ರಾಜ್ಯ ಸರ್ಕಾರದ ಮಹಿಳೆಯರ ಕಲ್ಯಾಣ ಮತ್ತು ಅಭಿವೃದ್ಧಿ ವಿಭಾಗದ ಇಬ್ಬರು ಕಾರ್ಯದರ್ಶಿಗಳಿರುತ್ತಾರೆ. ಮಹಿಳೆಯರಿಗೆ ಉದರಿ ಒದಗಿಸುವ ಸರ್ಕಾರೇತರ ಸಂಸ್ಥೆಗಳ ಪ್ರತಿನಿಧಿಗಳು ಮತ್ತು ತಜ್ಞರು ಮಂಡಲಿಯ ಸದಸ್ಯರಾಗಿರುತ್ತಾರೆ. ಹೀಗೆ ಸರ್ಕಾರ ಸೂಚಿಸಿದ ಏಳು ಸದಸ್ಯರಿರುತ್ತಾರೆ.

ಕೋಶದ ಸರ್ವಸದಸ್ಯರಲ್ಲಿ ಕೋಶದ ಪ್ರವರ್ತಕರು ಖಾಯಂ ಸದಸ್ಯರಾಗಿರುತ್ತಾರೆ ಮತ್ತು ಆಡಳಿತ ಮಂಡಲಿಯ ಎಲ್ಲ ಸದಸ್ಯರಿರುತ್ತಾರೆ. ಕೋಶದ ಷರತ್ತುಗಳಿಗೆ ಬಾಧ್ಯರಾಗಿ, ನಿಗದಿಸಿರುವ ವಂತಿಗೆಯನ್ನು ಸಲ್ಲಿಸಿ ಇತರ ಸಂಸ್ಥೆಗಳು ಮತ್ತು ವ್ಯಕ್ತಿಗಳು ಸದಸ್ಯತ್ವವನ್ನು ಪಡೆಯಬಹುದು. ಮಹಿಳೆಯರ ಆರ್ಥಿಕಾಭಿವೃದ್ಧಿ, ಉಳಿತಾಯ ಮತ್ತು ಉದರಿ ಕ್ಷೇತ್ರಗಳಲ್ಲಿ ತೊಡಗಿರುವ ಎಲ್ಲ ವಿಧ್ಯುಕ್ತವಾದ ಸಂಸ್ಥೆಗಳು, ಸರ್ಕಾರಿ ಸಂಸ್ಥೆಗಳು, ಅದರ ನಿಯೋಗಿ ಸಂಸ್ಥೆಗಳು, ದಾನದ ನ್ಯಾಸಗಳು, ಸೇವಾಸಂಸ್ಥೆಗಳು, ಶಿಕ್ಷಣ ಮತ್ತು ಸಂಶೋಧನೆಯ ಸಂಸ್ಥೆಗಳು ಸದಸ್ಯರಾಗಬಹುದು. ಈ ಕ್ಷೇತ್ರದ ತಜ್ಞರು, ಫಲಾನುಭವಿಗಳು ಅವರ ತಂಡ, ಒಕ್ಕೂಟಗಳು ಸದಸ್ಯರಾಗಬಹುದು.

### ಕೋಶದ ಹೊರಗೆ—ಸವಾಲುಗಳು ಮತ್ತು ಅವಕಾಶಗಳು

ರಾಷ್ಟ್ರೀಯ ಮಹಿಳಾ ಕೋಶದ ವಿವರಗಳಿಂದ ಭಾರತದ ಬಡವರ ಜೀವನವನ್ನು ಮತ್ತಷ್ಟು ಬೆಳಕಿಗೆ ತರುವ ಪ್ರಯತ್ನ ನಡೆದಿದೆಯೆಂದು ತಿಳಿಯುತ್ತದೆ. ಮಹಿಳೆಯರಲ್ಲಿ ದಾರಿದ್ರ್ಯ ಅತಿಯಾಗಿರುವುದರಿಂದ ಅದರ ಆರ್ಥಿಕಾಭಿವೃದ್ಧಿಯು ಕಡ್ಡಾಯವಾಗಿದೆ. ದೇಶದ ಆರ್ಥಿಕ ಪ್ರಗತಿಯಲ್ಲಿ ಮಹಿಳೆಯರ ಪಾತ್ರ ಮಹತ್ವಪೂರ್ಣವಾಗಿದೆ. ಇದಕ್ಕೆ ಅಗತ್ಯವಿರುವ ಮಾಹಿತಿಗಳನ್ನು, ಸಂಪನ್ಮೂಲಗಳನ್ನು ಸಂಗ್ರಹಿಸಿ ಉತ್ಪಾದನ ಕಾರ್ಯಗಳಲ್ಲಿ ವಿನಿಯೋಜಿಸಬೇಕಾಗಿದೆ, ಅವರಿಗಾಗಿ ನೂತನ ಸಾಂಸ್ಥಿಕ ಅಧೋರಚನೆಗಳನ್ನು ಒದಗಿಸಬೇಕಾಗಿದೆ. ಅವರ ವೈಯಕ್ತಿಕ ಬೆಳವಣಿಗೆಗಾಗಿ

ಅಕ್ಷರ ಕಲಿಕೆ, ಕುಟುಂಬ ಕಲ್ಯಾಣ ಶಿಕ್ಷಣ, ಸ್ವಾವಲಂಬನೆಯ ಶಿಕ್ಷಣ, ಶಾರೀರಿಕ ಮತ್ತುಮಾನಸಿಕ ಆರೋಗ್ಯಕ್ಕಾಗಿ ಸರಳ ಜೀವನ ಶೈಲಿಯ ಶಿಕ್ಷಣಗಳ ಆವಶ್ಯಕತೆ ಇದೆ. ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಸಂಸ್ಥೆಗಳು, ಹಣಕಾಸಿನ ಸಂಸ್ಥೆಗಳು, ಸ್ವಯಂಸೇವಾಸಂಸ್ಥೆಗಳು, ಶಿಕ್ಷಣ, ಸಂಶೋಧನೆ ಮತ್ತು ತರಬೇತಿ ಕೇಂದ್ರಗಳು ಮಹಿಳಾ ಕ್ಷೇತ್ರದಲ್ಲಿ ತಮಗಿರುವ ಅವಕಾಶಗಳನ್ನು ಗುರುತಿಸಿ ಹೊಸ ಕಾರ್ಯಕ್ರಮಗಳನ್ನು ರೂಪಿಸುವಾಗ ವಿಭಿನ್ನ ಪ್ರದೇಶದ ಜನಾಂಗಗಳ ಮತ್ತು ಮತಾವಲಂಬಿಗಳ ಜೀವನದ ರೀತಿ ನೀತಿಗಳು, ಆಲೋಚನೆಗಳು, ಆಚರಣೆಗಳು, ಅಭ್ಯಾಸಗಳನ್ನು ತಿಳಿಯಲು ಸಾಮಾಜಿಕ ಮತ್ತು ಮಾನಸಿಕ ತಜ್ಞರ ಅಭಿಪ್ರಾಯ ಸಲಹೆಗಳಿಗೆ ಪ್ರಾಮುಖ್ಯವನ್ನು ಕೊಡಬೇಕಾಗುತ್ತದೆ. ಮಹಿಳಾ ಸಾಂಸ್ಕೃತಿಕ ಸಂಸ್ಥೆಗಳು, ಸಮಾಜಸೇವಾ ಸಂಸ್ಥೆಗಳು ಮತ್ತು ನಿಧಿಸಂಗ್ರಹಣಾ ಸಂಸ್ಥೆಗಳಿಗೆ ತಮ್ಮ ಕಲಾಪಗಳನ್ನು ವಿಸ್ತರಿಸಲು ಅಪಾರವಾದ ಅವಕಾಶಗಳಿರುತ್ತವೆ. ತಮ್ಮ ಕಾರ್ಯಗಳಿಗೆ ಭಾರತದ ದರಿದ್ರ ಮಹಿಳೆಯರನ್ನು ಕೇಂದ್ರವಾಗಿರಿಸಿಕೊಂಡು ವಿವಿಧೋದ್ದೇಶ ಸಂಘ ಸಂಸ್ಥೆಗಳು ಹಾಗೂ ಹಲವಾರು ವ್ಯಕ್ತಿಗಳ ತಜ್ಞರು ಮಾಹಿತಿಗಳ ವಿನಿಮಯದ ಮೂಲಕ ಅಭಿವೃದ್ಧಿಕಲಾಪಗಳನ್ನು ರೂಪಿಸಿ ಅನುಷ್ಠಾನಕ್ಕೆ ತರಬೇಕಾಗಿದೆ. ಹಣಕಾಸಿನ ಸಂಸ್ಥೆಗಳು ಮತ್ತು ಬ್ಯಾಂಕುಗಳು ಸಮಾಜದಲ್ಲಿ ದಾರಿದ್ರ್ಯದಿಂದ ಕಂಗೆಟ್ಟವರನ್ನು ದೂರವಿರಿಸಿ ತಮ್ಮ ಸಾಮಾಜಿಕ ಹೊಣೆಗಳನ್ನು, ಕರ್ತವ್ಯಗಳನ್ನು ನೆರವೇರಿಸುವುದು ಅಸಾಧ್ಯದ ಮಾತು. ಆದ್ದರಿಂದ ಎಲ್ಲ ವಲಯದ ಬ್ಯಾಂಕುಗಳು ದರಿದ್ರ ಮಹಿಳೆಯರನ್ನು ಹೊಸ ಕ್ಷೇತ್ರದ ಗ್ರಾಹಕರೆಂದು ಗುರುತಿಸಿ ಹೊಸ ಠೇವಣಿ ಮತ್ತು ಉದರಿ ಯೋಜನೆಗಳನ್ನು ರೂಪಿಸುವಾಗ ಅರೆ ಸಾಂಪ್ರದಾಯಿಕತೆ ಮತ್ತು ನಮ್ಯತೆಗೆ ವಿಶೇಷವಾಗಿ ಪ್ರಾಮುಖ್ಯ ಕೊಡಬೇಕಾಗುತ್ತದೆ. ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಲ್ಲಿ ಸಾಮಾಜಿಕ ಬ್ಯಾಂಕಿಂಗಿಗೆ ಪೂರ್ಣ ವಿರಾಮ ಕೊಡಬೇಕೆಂಬ ಕೂಗು ಕೇಳಿಸುತ್ತಿದ್ದರೂ ಭಾರತದ ಇಂದಿನ ಪರಿಸ್ಥಿತಿಯಲ್ಲಿ ಇದು ಅವಿಚಾರಿಗಳ ನಿರ್ಧಾರವೆಂದರೆ ತಪ್ಪಾಗಲಾರದು. ಮಹಿಳೆಯರ ಅಭಿವೃದ್ಧಿಗಾಗಿ ಸೌಲಭ್ಯಗಳನ್ನು ಒದಗಿಸುವಾಗ ಜಾಗರೂಕತೆ ವಹಿಸಬೇಕಾಗುತ್ತದೆ — ಬೆಂಗಳೂರಿನ ನಗರ ಸಾರಿಗೆ ವಾಹನದಲ್ಲಿ ಮಹಿಳೆಯರಿಗಾಗಿ ಪೀಠಗಳನ್ನು ಕಾದಿರಿಸಿದ್ದರೂ ಫಲಾನುಭವಿಗಳು ಮಾತ್ರ ಯುವಕರು, ವಕೀಲರು, ಅಧಿಕಾರಿಗಳು ಎಲ್ಲ ಮಹನೀಯರು. ಆದ್ದರಿಂದ ಎಲ್ಲ ಸಂಸ್ಥೆಗಳೂ ಸೌಲಭ್ಯಗಳನ್ನು ಒದಗಿಸಿ ಮಹಿಳೆಯರೇ ಫಲಾನುಭವಿಗಳಾಗಿರಬೇಕೆಂದು ಯುಕ್ತವಾದ ಕಾನೂನುಗಳನ್ನು ಅನುಷ್ಠಾನಕ್ಕೆ ತರಲೇಬೇಕು. ಪೃಥ್ವಿಯ ಶೃಂಗ ಸಭೆಯ ನಂತರ ಪರಿಸರದ ರಕ್ಷಣೆಗಾಗಿ ಬೆಂಗಾಡನ್ನು ಹಸಿರು ವನವಾಗಿಸಲು, ಭೂಮಿಯ ಹಸಿರನ್ನು ಬೆಳೆಸಿ ಉಳಿಸಲು ವಿಶ್ವದಾದ್ಯಂತ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಮಾನವ ಕುಲಕ್ಕೆ ಪೃಥ್ವಿಯಂತಿರುವ ಮಹಿಳೆಯನ್ನು ದಾರಿದ್ರ್ಯದ ಮೂಲೆಗೊತ್ತರಿಸಿ ರೂಪಿಸುವ ಅಭಿವೃದ್ಧಿ ಕಾರ್ಯಕ್ರಮಗಳು ಎಂದೂ ಯಶಸ್ವಿಯಾಗಲಾರದು. ಈಗ ಬ್ಯಾಂಕುಗಳು ಮತ್ತಿತರ ಹಣಕಾಸಿನ ಸಂಸ್ಥೆಗಳು ಬಡತನದಲ್ಲಿ ನರಳುತ್ತಿರುವ ಮಹಿಳೆಯರ ಕ್ಷೇತ್ರವನ್ನು ವಿನಿಯೋಜನೆಗೆ ಗುರುತಿಸುವಾಗ ಅಲ್ಪಾವಧಿಯ ಬೆದರಿಕೆಗಳನ್ನು ಮೀರಿರುವ ದೀರ್ಘಾವಧಿಯ ಅವಕಾಶಗಳಿಗೆ ಪ್ರಾಮುಖ್ಯ ಕೊಡಬೇಕಾಗುತ್ತದೆ. ಈ ವರೆಗೂ ಸಂಘಟಿತ ವಲಯದ ಉದರಿ ಸಂಸ್ಥೆಗಳ ತಿರಸ್ಕಾರಕ್ಕೆ ಬಲಿಯಾಗಿ ಬೆಂಗಾಡಿನ ಬರಡು ಮರದಂತಿರುವ ಮಹಿಳೆಯರ ಬದುಕಿನಲ್ಲಿ ನೂತನ ಉದರಿ ಯೋಜನೆಯು ಚೈತನ್ಯದ ಹೊಸ ಗಾಳಿ ಬೀಸಿ, ತಂಪೆರೆದು, ಹಸಿರ ಸಿರಿಯನ್ನು ತುಂಬಲಿ. ಬಡ ಮಹಿಳೆಯರಲ್ಲಿರುವ ಸುಪ್ತಶಕ್ತಿಯನ್ನು ಪೋಷಿಸಿ ಶಿಕ್ಷಣದಿಂದ ಆತ್ಮವಿಶ್ವಾಸ, ಆತ್ಮಗೌರವವನ್ನು ಬೆಳೆಸಿ ಅವರ ಅಭಿವೃದ್ಧಿಯ ಸಾಧನೆಗೆ ಬೇಕಾಗಿರುವ ದೃಢಮನೋಬಲ, ಸಾಮರ್ಥ್ಯ ಮತ್ತು ಹುಮ್ಮಸ್ಸುಗಳನ್ನು ಬೆಂಬಲಿಸುವ ಪರಿಸರವಿರಲಿ.

### ಸೌಲಭ್ಯದ ವ್ಯಾಪ್ತಿಯಲ್ಲಿ ಅಪೂರ್ಣತೆ

ರಾಷ್ಟ್ರೀಯ ಮಹಿಳಾ ಕೋಶವನ್ನು ರಚಿಸುವಾಗ ಮೊದಲ ಆರು ವರ್ಷಗಳಲ್ಲಿ ಅಂದರೆ ಮುಂದಿನ ಶತಮಾನದ ಆದಿಯಲ್ಲಿ ಎರಡು ಲಕ್ಷ ದರಿದ್ರ ಮಹಿಳೆಯರಿಗೆ ಸೌಲಭ್ಯಗಳನ್ನು ಒದಗಿಸಲು ಯೋಜಿಸಿದೆ. ಆದರೆ ನಮ್ಮ ಸಂಪದ್ಭರಿತ ದೇಶದಲ್ಲಿ ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವವರ ಸಂಖ್ಯೆ ಸುಮಾರು 35 ಕೋಟಿ. ಅವರಲ್ಲಿ ಶೇ. 50ರಷ್ಟು ಮಹಿಳೆಯರಿರುವರೆಂಬುದು ಒಂದು ಅಂದಾಜು. ಸರ್ಕಾರ ತನ್ನ ದಾರಿದ್ರ್ಯ ನಿರ್ಮೂಲನಾ ಕಾರ್ಯಗಳಿಗೆ ಹಲವು ಲಕ್ಷ ಮಹಿಳೆಯರನ್ನು ಮಾತ್ರ ಗುರುತಿಸಿ ಆಯ್ದುಕೊಂಡಿದೆ. ಆದ್ದರಿಂದ ಕೋಟಿಗಟ್ಟಲೆ ಮಹಿಳೆಯರ ದಾರಿದ್ರ್ಯದ ಸಮಸ್ಯೆಗಳಿಗೆ ಪರಿಹಾರವಿರುವುದಿಲ್ಲ. ಸ್ವಯಂ ಸೇವಾ ಸಂಸ್ಥೆಗಳು, ದಾನದ ನ್ಯಾಸಗಳು, ಶ್ರೀಮಂತ ವರ್ಗದ ದಾನಿಗಳು ಮತ್ತಿತರ ಉದಾರ ಮನೋಭಾವದ ಸಮಾಜಸೇವಕರು ಈ ಮಹಿಳೆಯರ ಕ್ಷೇತ್ರದಲ್ಲಿ ಕಾರ್ಯತತ್ಪರರಾಗಲು ಅವಕಾಶಗಳಿಗೆ ಕೊರತೆಯೇ ಇಲ್ಲ. ರಾಷ್ಟ್ರೀಯ ಮಹಿಳಾ ಕೋಶದ ಮೊದಲ ವರ್ಷದ ಕಾರ್ಯ ಪ್ರಗತಿಯ ವರದಿ ಇನ್ನೂ ಬಂದಿಲ್ಲ. ಈ ಕಾರ್ಯಕ್ರಮಗಳಲ್ಲಿ ಭಾಗ ವಹಿಸಲಿಚ್ಛಿಸುವ ಸಾರ್ವಜನಿಕರಿಗೆ ಮತ್ತು ಸಂಸ್ಥೆಗಳಿಗೆ ಕೋಶವನ್ನು ಕುರಿತ ವರದಿ ತಮ್ಮ ಯೋಜನೆಗಳನ್ನು ರೂಪಿಸಲು ನೆರವಾಗಬಹುದು. ಮಹಾತ್ಮ ಗಾಂಧಿಯವರ 125ನೆಯ ಜನ್ಮದಿನದ ಆಚರಣೆಯ ಸಮಯದಲ್ಲಿ "ದರಿದ್ರ ನಾರಾಯಣನ ಸೇವೆಯು ನನಗೆ ಬಹು ಪವಿತ್ರವಾದ ಸೇವೆಯಾಗಿದೆ" ಎಂದು ಅವರು 50 ವರ್ಷಗಳ ಹಿಂದೆ ಹೇಳಿದ ಮಾತು ಮರೆಯಲು ಸಾಧ್ಯವಿಲ್ಲ. ಆಚಾರ್ಯ ವಿನೋಬಾ ಭಾವೆಯರ ಜನ್ಮಶತಾಬ್ದಿಯ ವರ್ಷವನ್ನು ಸಿರಿವಂತರೆಲ್ಲರೂ ನೂತನ ದಾನ ಯಜ್ಞದ ಮೂಲಕ ಆಚರಿಸಿದರೆ ನತದೃಷ್ಟರ ಬಾಳಿನಲ್ಲೂ ಬೆಳಕು ಹರಿದೀತು. ಭಾರತದ ದರಿದ್ರ ಮಹಿಳೆಯರಿಂದ ಆರ್ಥಿಕಾಭಿವೃದ್ಧಿಯ ತಜ್ಞರು ಹೊಸ ದೃಷ್ಟಿಯನ್ನು ಬೆಳೆಸಿಕೊಂಡು ಮುಂದಿನ ಪೀಳಿಗೆಗಾಗಿ ನೂತನ ಯೋಜನೆಗಳನ್ನು ರೂಪಿಸುವಾಗ ಆಧುನಿಕ ಜೀವನದ ಕೃತಕತೆಗಳನ್ನು ಅಳಿಸಿ, ಪ್ರಕೃತಿಯ ಮಡಿಲಲ್ಲಿ ಸರಳ ಜೀವನದ ಮೂಲಕ ದಿವ್ಯ ಚೇತನದ ಪ್ರತಿನಿಧಿಯಾಗಿ ಪ್ರತಿಯೊಬ್ಬರೂ ಮುಕ್ತಿ ಮತ್ತು ಆನಂದದ ಸವಿಯನ್ನು ಪಡೆಯಲು ಸೂಕ್ತವಾದ ಕಾರ್ಯಗಳನ್ನು ರೂಪಿಸಿ ಅನುಷ್ಠಾನಕ್ಕೆ ತರಬೇಕಾಗಿದೆ. ★

# 'ನರಸಿಂಹಂ ಸಮಿತಿ'ಯ ಶಿಫಾರಸುಗಳು ಮತ್ತು ಬ್ಯಾಂಕಿಂಗ್ ವ್ಯವಸ್ಥೆಯ ಪುನರ್ರಚನೆ

ಎಸ್. ಮಹಾಬಲೇಶ್ವರ
ಭಾರತೀಯ ರಿಸರ್ವ್‌ಬ್ಯಾಂಕ್, ಬೆಂಗಳೂರು

'ಲಾಭಗಳಿಕೆ ಮಹಾಪಾಪ. ಸಾಮಾಜಿಕ ಉದ್ದೇಶಗಳ ಈಡೇರಿಕೆಯೇ ಮುಖ್ಯ. ದೀರ್ಘಕಾಲದಲ್ಲಿ ಇದರಿಂದ ಬ್ಯಾಂಕಿಗೆ ಲಾಭ' ಎಂಬ ದೃಷ್ಟಿ ಈಗ ಮರೆಯಾಗಿದೆ. ಲಾಭವೇ ಈಗ ಬ್ಯಾಂಕ್ ದಕ್ಷತೆಗೆ ನಿಕಷ. ಆದರೆ ಜವಾಬ್ದಾರಿಯೇ ಇಲ್ಲದೆ ಲಾಭವೇ ಪ್ರಧಾನವೆಂದು ಪರಿಗಣಿಸುವ ದೃಷ್ಟಿ ಸರಿಯೆ ? ಈ ಉಭಯ ಸಂಕಟದಿಂದ ಪಾರಾಗುವುದು ಹೇಗೆ? ಬ್ಯಾಂಕಿಂಗ್ ಸುಧಾರಣೆ ಕುರಿತ ನರಸಿಂಹಂ ಸಮಿತಿಯ ಶಿಫಾರಸುಗಳನ್ನು ಹೇಗೆ ಇಂದಿನ ಪರಿಸ್ಥಿತಿಗಳಿಗೆ ಹೊಂದಿಸಿಕೊಳ್ಳಬೇಕು ?

ಕನ್ನಡದಲ್ಲಿ 'ರೋಗಿ ಬಯಸಿದ್ದು ಹಾಲನ್ನ: ವೈದ್ಯರು ಹೇಳಿದ್ದೂ ಹಾಲನ್ನ' ಎಂಬ ಗಾದೆ ಮಾತಿದೆ. ಬ್ಯಾಂಕಿಂಗ್ ವ್ಯವಸ್ಥೆಯ ಪುನರ್ರಚನೆಗೆ ಕಾರಣಗಳನ್ನು ಹುಡುಕುತ್ತಿದ್ದ ಹಣಕಾಸು ಸಚಿವರಿಗೆ ಷೇರು ಹಗರಣ ಪರವಾಗಿ ಒದಗಿಬಂದ ಕತೆ ತುಂಬ ಸ್ವಾರಸ್ಯಕರವಾಗಿದೆ. 1991ರಲ್ಲಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಪಿ. ವಿ. ನರಸಿಂಹರಾವ್ ನೇತೃತ್ವದ ಸರ್ಕಾರ ವಿಶ್ವ ಬ್ಯಾಂಕು ಮತ್ತು ಅಂತರರಾಷ್ಟ್ರೀಯ ಹಣ ನಿಧಿಯಂತಹ ಸಾಲಿಗರ ಒತ್ತಾಯಗಳಿಗೆ ಮಣಿದು, ತನ್ನ ಉದಾರೀಕರಣದ ನೀತಿಯ ಭಾಗವಾಗಿ, ದೇಶದ ಹಣಕಾಸು ವ್ಯವಸ್ಥೆಯನ್ನು ಪುನರ್ರಚಿಸಲು ತೀರ್ಮಾನಿಸಿತು. ನರಸಿಂಹರಾಯರು ಈ ಹಿಂದೆ ಕೇಂದ್ರ ಹಣಕಾಸು ಕಾರ್ಯದರ್ಶಿಯೂ, ರಿಸರ್ವ್ ಬ್ಯಾಂಕಿನ ಗವರ್ನರ್‌ರೂ ಆಗಿದ್ದ ಡಾ॥ ಮನಮೋಹನ್‌ಸಿಂಗ್‌ರನ್ನು ಹಣಕಾಸು ಮಂತ್ರಿಯಾಗಿ ಆರಿಸುವ ಮೂಲಕ ರಾಜಕೀಯ ಮುತ್ಸದ್ದಿಗಳನ್ನು ಅಚ್ಚರಿಗೊಳಿಸಿದರು. ಭಾರತೀಯ ಹಣಕಾಸು ವಲಯದಲ್ಲಿ ಆಗಬೇಕಾಗಿರುವ ಸಮಗ್ರ ಬದಲಾವಣೆಗಳ ಕುರಿತು ಅಧ್ಯಯನ ನಡೆಸಿ, ವರದಿ ಸಲ್ಲಿಸಲು ರಿಸರ್ವ್ ಬ್ಯಾಂಕಿನ ಮಾಜಿ ಗವರ್ನರ್ ಎಂ. ನರಸಿಂಹಂ ಅವರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರದ ಸಮಿತಿಯೊಂದನ್ನು ಸರ್ಕಾರ 1991ರ ಆಗಸ್ಟ್‌ನಲ್ಲಿ ನೇಮಿಸಿತು. ಈ ಸಮಿತಿ ನವೆಂಬರ್ 1991ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು.

ಈ ಸಮಿತಿಯ ಅತಿ ಮುಖ್ಯವಾದ ಶಿಫಾರಸುಗಳೆಂದರೆ ಬ್ಯಾಂಕುಗಳಿಗೆ ಹೆಚ್ಚಿನ ಸ್ವಾತಂತ್ರ್ಯ ನೀಡಿಕೆ, ಏಕರೂಪ ಲೆಕ್ಕ ಪದ್ಧತಿ ಮತ್ತು ಬ್ಯಾಂಕುಗಳ ಬಂಡವಾಳ ವೃದ್ಧಿ. ನರಸಿಂಹಂ ಸಮಿತಿಯ ಶಿಫಾರಸುಗಳನ್ನು ಒಪ್ಪಿಕೊಂಡ ಸರ್ಕಾರ ಈ ಶಿಫಾರಸುಗಳನ್ನು ಕಾರ್ಯರೂಪಕ್ಕೆ ತರುವ ಕೆಲಸವನ್ನು ಭಾರತೀಯ ರಿಸರ್ವ್ ಬ್ಯಾಂಕಿಗೆ ಒಪ್ಪಿಸಿತು. ಭಾರತೀಯ ರಿಸರ್ವ್ ಬ್ಯಾಂಕು ಕಾರ್ಯೋನ್ಮುಖವಾಗುವಷ್ಟರಲ್ಲಿ, ಭಾರತೀಯ ಷೇರು ಮಾರುಕಟ್ಟೆಗಳಲ್ಲಿ ನಡೆದ ಹಗರಣ 1992ರ ಏಪ್ರಿಲ್‌ನಲ್ಲಿ ಬೆಳಕಿಗೆ ಬಂತು. ಈ ಹಗರಣ ನಡೆಯಲು ಕೆಲವು ಬ್ಯಾಂಕುಗಳು ಕೆಲವು ಷೇರು ದಲ್ಲಾಳಿಗಳಿಗೆ ನಿಯಮಗಳಿಗೆ ವ್ಯತಿರಿಕ್ತವಾಗಿ ನೆರವಿನ ಹಸ್ತವನ್ನು ಚಾಚಿದ್ದು ಮತ್ತು ಬ್ಯಾಂಕುಗಳಲ್ಲಿನ ವ್ಯವಸ್ಥಾಪನೆ/ಮೇಲ್ವಿಚಾರಣೆ ದೋಷಗಳೇ ಕಾರಣವೆಂದು ಹಣಕಾಸು ಸಚಿವರು ಹೇಳಿದರು. ಹೀಗಾಗಿ ಬ್ಯಾಂಕಿಂಗ್ ಉದ್ಯಮದ ಪುನರ್ರಚನೆಗೆ ಕಾರಣಗಳನ್ನೂ ನೆಪಗಳನ್ನೂ ಹುಡುಕುತ್ತಿದ್ದ ಕೇಂದ್ರ ಸರ್ಕಾರಕ್ಕೆ ಈ ಅವಕಾಶ ದೈವದತ್ತವಾಗಿ ಒದಗಿಬಂತು.

ಇಂತಹ ಸನ್ನಿವೇಶದಲ್ಲಿ ಭಾರತೀಯ ರಿಸರ್ವ್ ಬ್ಯಾಂಕು ನರಸಿಂಹಂ ಸಮಿತಿಯ ಶಿಫಾರಸುಗಳನ್ನ ಹಂತಹಂತವಾಗಿ, ಆದರೆ ಆದಷ್ಟು ಬೇಗ, ಜಾರಿಗೆ ತರಲು ಕ್ರಮಗಳನ್ನು ಕೈಗೊಂಡಿತು. ನರಸಿಂಹಂ ಸಮಿತಿಯ ಶಿಫಾರಸುಗಳು ಬ್ಯಾಂಕುಗಳ ಆರೋಗ್ಯಕರ ಬೆಳವಣಿಗೆಯನ್ನೇ ಗಮನದಲ್ಲಿಟ್ಟುಕೊಂಡಿವೆಯಾದರೂ, ಇದರಲ್ಲಿ ನ್ಯೂನತೆಗಳೇ ಇಲ್ಲವೆಂದಲ್ಲ, ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳನ್ನು, ಅದರಲ್ಲೂ ರಾಷ್ಟ್ರೀಕೃತ ಬ್ಯಾಂಕುಗಳನ್ನು, ತನ್ನ ಇಲಾಖೆಗಳಲ್ಲೊಂದು ಎಂಬ ಹಾಗೆ 1969ರಿಂದ ಈಚೆಗೆ ರಾಜಕೀಯ ಉದ್ದೇಶಗಳಿಗಾಗಿ ಬಳಸಿಕೊಂಡು ಬಂದ ಸರ್ಕಾರ ರಾತ್ರಿ ಬೆಳಗಾಗುವುದರೊಳಗಾಗಿ 'ಲಾಭ ತೋರಿಸಿ', 'ಏಕರೂಪ ಲೆಕ್ಕ ಪದ್ಧತಿ ಅನುಸರಿಸಿ', 'ಲಾಭ ಗಳಿಸದಿದ್ದರೆ ನಿಮಗೆ ರಕ್ಷಣೆ ಇಲ್ಲ' ಎಂದು ಹೇಳುತ್ತಿರುವುದು ಆಯಾ ಬ್ಯಾಂಕುಗಳ ದೃಷ್ಟಿಯಿಂದ ಮಾರಕವಾಗಿದೆ. 'ಲಾಭಗಳಿಕೆ

ಒಂದು ಮಹಾಪಾಪ. ಸಾಮಾಜಿಕ ಉದ್ದೇಶಗಳ ಈಡೇರಿಕೆಯೇ ಅತಿ ಮುಖ್ಯ. ಸಾಮಾಜಿಕ ಅಭಿವೃದ್ಧಿಯೇ ಬ್ಯಾಂಕುಗಳಿಗಾಗುವ ವ್ಯವಹಾರಿಕ ನಷ್ಟವನ್ನು ದೀರ್ಘ ಕಾಲದಲ್ಲಿ ತುಂಬಿಕೊಡಬಲ್ಲದು. ಎಂಬುದು ಬ್ಯಾಂಕ್ ರಾಷ್ಟ್ರೀಕರಣದ ಹಿಂದಿನ ಚಿಂತನೆಯಾಗಿತ್ತು' ಒಂದು ಕಡೆ ಕೇಂದ್ರಸರ್ಕಾರ 'ಲಾಭ ಗಳಿಸಿ ಸಾಮಾಜಿಕ ಜವಾಬ್ದಾರಿಯನ್ನೂ ನಿರ್ವಹಿಸಿ' ಎನ್ನುತ್ತಿರುವುದು ರಾಷ್ಟ್ರೀಕೃತ ಬ್ಯಾಂಕುಗಳಿಗೆ ನುಂಗಲಾರದ ತುತ್ತಾಗಿದೆ. ಇನ್ನೊಂದು ಕಡೆ, ಸಾಮಾಜಿಕ ಜವಾಬ್ದಾರಿಯೇ ಇಲ್ಲದ, ಕೈತುಂಬ ಹೇರಳ ಲಾಭ ಸಂಪಾದಿಸುತ್ತಿರುವ ಖಾಸಗಿ ಮತ್ತು ವಿದೇಶಿ ಬ್ಯಾಂಕುಗಳನ್ನು ಸರ್ಕಾರವೂ ಜನತೆಯೂ ಕೊಂಡಾಡುತ್ತಿವೆ. ಇಂತಹ ಸಂದಿಗ್ಧ ಮತ್ತು ಗೊಂದಲಮಯ ಸನ್ನಿವೇಶದಲ್ಲಿ ನರಸಿಂಹಂ ಸಮಿತಿಯ ಶಿಫಾರಸುಗಳನ್ನು ಗಮನದಲ್ಲಿಟ್ಟುಕೊಂಡು, ಸಮಗ್ರ ಬ್ಯಾಂಕಿಂಗ್ ವ್ಯವಸ್ಥೆಯನ್ನು ಹೇಗೆ ಪುನರ್ರಚಿಸಿದರೆ ರಾಷ್ಟ್ರಕ್ಕೆ ಅನುಕೂಲಕರವೆಂಬುದನ್ನು ಚರ್ಚಿಸಬಹುದು.

### ಶಾಸನಿಯುತ ದ್ರವತ್ವ ಅನುಪಾತ (ಶದ್ರಅ) ಇಳಿಕೆ

ನರಸಿಂಹಂ ಸಮಿತಿಯ ಅತಿಮುಖ್ಯ ಶಿಫಾರಸುಗಳಲ್ಲಿ ಒಂದು— ವರದಿ ಸಲ್ಲಿಕೆ ಸಮಯದಲ್ಲಿದ್ದ ಶೇ. 38.5 ಶದ್ರಅವನ್ನು ಐದು ವರ್ಷಗಳಲ್ಲಿ ಹಂತಹಂತವಾಗಿ ಶೇ. 25ಕ್ಕೆ ಇಳಿಸಬೇಕು. ಮತ್ತು ಶದ್ರಅ ಮತ್ತು ನಗದು ಮೀಸಲು ಅನುಪಾತದ ಮೇಲೆ ನೀಡುತ್ತಿರುವ ಬಡ್ಡಿದರವನ್ನು ಹೆಚ್ಚಿಸಬೇಕು ಎಂಬುದು. ಈ ನಿಟ್ಟಿನಲ್ಲಿ ಭಾರತೀಯ ರಿಸರ್ವ್ ಬ್ಯಾಂಕು ಈಗಾಗಲೇ ಕೆಲವು ಕ್ರಮಗಳನ್ನು ಕೈಗೊಂಡಿದೆ. ನಗದು ಮೀಸಲು ಅನುಪಾತವನ್ನು ಶೇ. 14ಕ್ಕೆ ಇಳಿಸಲಾಗಿದೆ. ಶದ್ರಅವನ್ನು ಹಂತಹಂತವಾಗಿ ಇಳಿಸಲಾಗುತ್ತಿದೆ. ಸರ್ಕಾರಿ ಪ್ರತಿಭೂತಿಗಳ ಮೇಲೆ ನೀಡಲಾಗುತ್ತಿರುವ ಬಡ್ಡಿದರವನ್ನು ಶೇ. 2ರಿಂದ 3ರಷ್ಟು ಹೆಚ್ಚಿಸಲಾಗಿದೆ.

ಈ ಹಿಂದೆ ಬ್ಯಾಂಕುಗಳು ಠೇವಣಿ ಮತ್ತು ಇತರ ಮೂಲಗಳಿಂದ ಸಂಗ್ರಹಿಸಿದ ಹಣದ ಬಹುಪಾಲನ್ನು ಶದ್ರಅ ಮತ್ತು ನಗದು ಮೀಸಲು ಅನುಪಾತಗಳ ಹೆಸರಿನಲ್ಲಿ ಸರ್ಕಾರಿ ಅನುಮೋದಿತ ಪ್ರತಿಭೂತಿಗಳಲ್ಲಿ ವಿನಿಯೋಜಿಸಬೇಕಾಗುತ್ತಿತ್ತು. ಈ ವಿನಿಯೋಜನೆಗಳಿಂದ ಬ್ಯಾಂಕುಗಳಿಗೆ ಬಡ್ಡಿಯ ರೂಪದಲ್ಲಿ ಬರುವ ಆದಾಯವು ತುಂಬಾ ಕಡಿಮೆಯಾಗಿತ್ತು. ಅಲ್ಲದೆ, ಬ್ಯಾಂಕುಗಳು ಈ ಹಣವನ್ನು ಬೇರೆ ಯೋಗ್ಯ ಸಾಲಗಾರರಿಗೆ ಕೊಟ್ಟು ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳುವ ಅವಕಾಶಗಳಿಂದ ವಂಚಿತವಾಗುತ್ತಿದ್ದವು. ಈ ಎರಡೂ ಶೀರ್ಷಿಕೆಗಳಲ್ಲಿ ಇಳಿಕೆಯಾಗಿರುವುದರಿಂದ ಬ್ಯಾಂಕುಗಳಿಗೆ ತಮ್ಮಲ್ಲಿರುವ ಹಣವನ್ನು ಹೆಚ್ಚು ಲಾಭಕರ ಯೋಜನೆಗಳಲ್ಲಿ (ಉದರಿ ನೀಡಿಕೆಯೂ ಸೇರಿ) ವಿನಿಯೋಜಿಸುವ ಅವಕಾಶ ಹೆಚ್ಚುಹೆಚ್ಚಾಗಿ ಸಿಗಲಿದೆ. ಆಶ್ಚರ್ಯದ ಸಂಗತಿ ಎಂದರೆ, ಈ ಕ್ರಮವನ್ನು ಕೈಗೊಂಡಾಗಿನಿಂದ ಬ್ಯಾಂಕುಗಳು ಉದ್ಯಮ–ಕೈಗಾರಿಕೆಗಳಿಗೆ ಹೆಚ್ಚು ಉದರಿ ನೀಡುವ ಬದಲು, ಯಾವುದೇ ಒತ್ತಾಯವಿಲ್ಲದಿದ್ದರೂ ಸರ್ಕಾರೀ ಸಾಲಗಳಲ್ಲಿ ಹೂಡತೊಡಗಿವೆ. ಸಾಲಗಳ ಮೇಲೆ ವಿಧಿಸಬಹುದಾದ ಬಡ್ಡಿದರದಲ್ಲಿ ಇಳಿಕೆಯಾಗಿರುವುದೂ, ಸರ್ಕಾರಿ ಸಾಲಗಳ ಮೇಲೆ ಬಡ್ಡಿ ಗಣನೀಯವಾಗಿ ಏರಿರುವುದೂ ಇದಕ್ಕೆ ಕಾರಣವಿರಬಹುದು. 1993-94ರ ಮೊದಲ ನಾಲ್ಕು ತಿಂಗಳಲ್ಲಿ ವಾಣಿಜ್ಯ ಮತ್ತು ಕೈಗಾರಿಕಾ ರಂಗಕ್ಕೆ ಬ್ಯಾಂಕ್ ಉದರಿ 3,225 ಕೋಟಿ ರೂಪಾಯಿಗಳಷ್ಟು ಕಡಿಮೆಯಾಗಿರುವುದು ಗಮನಾರ್ಹ ಸಂಗತಿಯಾಗಿದೆ. ಬ್ಯಾಂಕುಗಳ ಕೈಯಲ್ಲಿ ಈಗಾಗಲೇ ಮೇಲೆ ತಿಳಿಸಿರುವ ಕಾರಣಗಳಿಂದ ಸಾಕಷ್ಟು ಹಣದ ದಾಸ್ತಾನಿದ್ದೂ, ಬ್ಯಾಂಕುಗಳು ಉದರಿ ನೀಡಲು ಹಿಂದೇಟು ಹಾಕುತ್ತಿರುವುದು ಚಿಂತಾಜನಕ ಅಂಶವಾಗಿದೆ.

### ಆದ್ಯತಾವಲಯ

ಆದ್ಯತಾ ವಲಯಕ್ಕೆ ನೀಡಬೇಕಾದ ಉದರಿ ಸೌಲಭ್ಯಗಳ ಬಗ್ಗೆ ಮರುಚಿಂತನೆ ನಡೆಸುವಂತೆ ನರಸಿಂಹಂ ಸಮಿತಿ ಶಿಫಾರಸು ಮಾಡಿದೆ. ಆದ್ಯತಾ ವಲಯಕ್ಕೆ ನೀಡಬೇಕಾದ ಉದರಿ ಪರಿಮಾಣವನ್ನು ಈಗಿರುವ ಶೇ. 40ರಿಂದ ಶೇ. 10ಕ್ಕೆ ಇಳಿಸುವಂತೆಯೂ ಆದ್ಯತಾ ವಲಯವನ್ನು ಪುನರ್‌ವ್ಯಾಖ್ಯಾನಿಸುವಂತೆಯೂ ಸಮಿತಿ ಸೂಚಿಸಿದೆ.

ಇದೊಂದು ಸ್ವಾಗತಾರ್ಹವಾದ ಶಿಫಾರಸು. ಆದ್ಯತಾ ವಲಯಕ್ಕೆ ನೀಡಿದ ಉದರಿ ಸೌಲಭ್ಯಗಳಿಂದ ಬ್ಯಾಂಕುಗಳಿಗೆ ಬರುವ ಆದಾಯವು ಬೇರೆ ಆದ್ಯತಾರಹಿತ ಸಾಲಗಳಿಂದ ಬರುವ ಆದಾಯಕ್ಕಿಂತ ಕಡಿಮೆ, ಬ್ಯಾಂಕುಗಳು ಈ ವಲಯಕ್ಕೆ ನೀಡಬೇಕಾದ ಉದರಿ ಪ್ರಮಾಣ ಶೇಕಡ 40ರಷ್ಟಿರುವುದರಿಂದ, ಅಷ್ಟರಮಟ್ಟಿಗೆ ತಮ್ಮ ಲಾಭದಲ್ಲಿ ಕೊರತೆ ಅನುಭವಿಸುತ್ತಿದ್ದವು. ನೈಜ ಹಣಕಾಸು ಅಗತ್ಯಗಳನ್ನು ಅನುಸರಿಸಿ, ಆದ್ಯತಾ ವಲಯವನ್ನು ಪುನರ್ ವ್ಯಾಖ್ಯಾನಿಸುವುದೂ ಈ ವಲಯಕ್ಕೆ ಮೀಸಲಿಡಬೇಕಾದ ಉದರಿ ಸೌಲಭ್ಯಗಳನ್ನು ಮಿತಿಗೊಳಿಸುವುದೂ ಬ್ಯಾಂಕುಗಳ ಲಾಭಗಳಿಕೆ ದೃಷ್ಟಿಯಿಂದ ತೀರಾ ಅಗತ್ಯವಾಗಿದೆ.

### ಬಂಡವಾಳ ಪರ್ಯಾಪ್ತತಾ ಅನುಪಾತ

ಭಾರತೀಯ ಬ್ಯಾಂಕಿಂಗ್ ಉದ್ಯಮದ ಒಂದು ವಿಚಿತ್ರ ಲಕ್ಷಣವೆಂದರೆ ಇಲ್ಲಿನ ಎಲ್ಲ ಬ್ಯಾಂಕುಗಳೂ, ತೀರಾ ಕಡಿಮೆ ಬಂಡವಾಳ ತಳಹದಿಯ ಮೇಲೆ ಕಾರ್ಯನಿರ್ವಹಿಸುತ್ತಿರುವುದು. ಉದಾಹರಣೆಗೆ 2,538 ಕೋಟಿ ರೂಪಾಯಿಗಳ ಠೇವಣಿ ಹೊಂದಿರುವ ವೈಶ್ಯ ಬ್ಯಾಂಕಿನ ಬಂಡವಾಳ ಒಂದು ಕೋಟಿ ಎಂಬತ್ತು ಲಕ್ಷ ರೂಪಾಯಿ ಮಾತ್ರ! ಬ್ಯಾಂಕುಗಳು ಸುಭದ್ರವಾದ ತಳಹದಿಯ ಮೇಲೆ ಕೆಲಸ ಮಾಡಬೇಕೆಂಬುದನ್ನು ಮನಗಂಡಿರುವ ನರಸಿಂಹಂ ಸಮಿತಿಯು, ಬ್ಯಾಂಕುಗಳು ಸಾಧಿಸಬೇಕಾದ ಬಂಡವಾಳ ಅನುರೂಪತಾ ಅನುಪಾತವನ್ನು ಗುರುತಿಸಿದೆ. ಎಲ್ಲ ಬ್ಯಾಂಕುಗಳೂ ಮಾರ್ಚಿ 93ರ ಹೊತ್ತಿಗೆ ಶೇಕಡ 4ರ ಅನುಪಾತವನ್ನು ಹೊಂದಬೇಕು. ಅಂತರರಾಷ್ಟ್ರೀಯ ಮಟ್ಟದಲ್ಲಿ ವ್ಯವಹರಿಸುವ ಬ್ಯಾಂಕುಗಳು ಮಾರ್ಚಿ 94ರ ಹೊತ್ತಿಗೆ ಶೇಕಡ 8ರ ಅನುಪಾತವನ್ನು

ಹೊಂದಬೇಕು. ಉಳಿದ ಬ್ಯಾಂಕುಗಳು ಶೇ. 8ರ ಅನುಪಾತವನ್ನು ಮಾರ್ಚ್ 96ರೊಳಗೆ ಹೊಂದಬೇಕೆಂದು ಸಮಿತಿ ಶಿಫಾರಸು ಮಾಡಿದೆ. ಬಹುತೇಕ ರಾಷ್ಟ್ರೀಕೃತ ಬ್ಯಾಂಕುಗಳು ನಷ್ಟದಲ್ಲಿರುವುದರಿಂದ ಅವುಗಳ ಅಷ್ಟೂ ಬಂಡವಾಳ ಕರಗಿ ಹೋಗಿದೆ. ರಾಷ್ಟ್ರೀಕೃತ ಬ್ಯಾಂಕುಗಳ ಸಂಪೂರ್ಣ ಸ್ವಾಮ್ಯವನ್ನು ಹೊಂದಿರುವ ಕೇಂದ್ರ ಸರ್ಕಾರ 1993-94ರ ಮುಂಗಡ ಪತ್ರದಲ್ಲಿ ಈ ಬ್ಯಾಂಕುಗಳು ಬಂಡವಾಳ ವೃದ್ಧಿಗಾಗಿ 5700 ಕೋಟಿ ರೂ.ಗಳನ್ನು ಮೀಸಲಿಟ್ಟಿದೆ. ಈ ಬಂಡವಾಳವನ್ನು ಅಪೇಕ್ಷಿಸುವ ಬ್ಯಾಂಕುಗಳು ತನ್ನೊಂದಿಗೆ ಒಡಂಬಡಿಕೆಯೊಂದಕ್ಕೆ ಸಹಿಹಾಕಬೇಕೆಂದು ಸರ್ಕಾರ ತಿಳಿಸಿದೆ. ತನ್ನ ಬಂಡವಾಳ ಅಗತ್ಯಗಳಿಗಾಗಿ ಭಾರತೀಯ ಸ್ಟೇಟ್ ಬ್ಯಾಂಕು ಈಗಾಗಲೇ ಮಾರುಕಟ್ಟೆಯನ್ನು ಪ್ರವೇಶಿಸಿದೆ. ಇದರ ಸಹವರ್ತಿ ಬ್ಯಾಂಕುಗಳಲ್ಲಿ ಹಲವು, ತಮಗೆ ಅಗತ್ಯವಾದಾಗ ಬಂಡವಾಳವನ್ನು ಷೇರು ಮತ್ತು ಸಾಲಪತ್ರಗಳ ರೂಪದಲ್ಲಿ ಸಂಗ್ರಹಿಸಬಹುದು. ಇರುವ ತೊಂದರೆಯೆಲ್ಲ ರಾಷ್ಟ್ರೀಕೃತ ಬ್ಯಾಂಕುಗಳದ್ದು. 1970ರ ಬ್ಯಾಂಕಿಂಗ್ ಕಂಪನಿಗಳ (ಸ್ವಾಧೀನ ಮತ್ತು ಉದ್ಯಮ ವರ್ಗಾವಣೆ) ಅಧಿನಿಯಮಕ್ಕೆ ತಿದ್ದುಪಡಿ ಆಗದೆ ಈ ಬ್ಯಾಂಕುಗಳು ಮಾರುಕಟ್ಟೆಗೆ ಬರುವಂತಿಲ್ಲ. ಷೇರು ನೀಡಿಕೆಗಾಗಿ ಇವು ಮಾರುಕಟ್ಟೆಗೆ ಬಂದರೂ, ಷೇರು ಹಗರಣ ಮತ್ತು ಏಕರೂಪ ಲೆಕ್ಕ ಪದ್ಧತಿಯಿಂದ ಈ ಬ್ಯಾಂಕುಗಳ ನೈಜ ಪರಿಸ್ಥಿತಿಯ ಅರಿವಿರುವ ಹೂಡಿಕೆದಾರರು ಇವುಗಳ ಷೇರುಗಳನ್ನು ಕೊಳ್ಳಲು ಮುಂದೆ ಬಂದಾರೆಯೇ ಎಂಬುದು ಯಕ್ಷಪ್ರಶ್ನೆ. ಖಾಸಗಿ ಬ್ಯಾಂಕುಗಳು ಹೊಸದಾಗಿ ಸಾರ್ವಜನಿಕರಿಂದ ಬಂಡವಾಳ ಸಂಗ್ರಹಿಸಲು ಯಾವ ತೊಂದರೆಯೂ ಇಲ್ಲವಾದರೂ, ಹೀಗೆ ಸಾರ್ವಜನಿಕರಿಗೆ ಷೇರು ನೀಡುವುದರಿಂದ ತಮ್ಮ ವ್ಯವಸ್ಥಾಪನಾ ನಿಯಂತ್ರಣಕ್ಕೆ ಎಲ್ಲಿ ಧಕ್ಕೆ ಬಂದೀತೋ ಎಂದು ಈ ಬ್ಯಾಂಕುಗಳು ಭಯಪಡುತ್ತಿವೆ. 1992ರ ಷೇರು ಮಾರುಕಟ್ಟೆಯ ಉಬ್ಬರದ ಸಮಯದಲ್ಲಿ ಖಾಸಗಿ ಬ್ಯಾಂಕುಗಳ ಷೇರುಗಳ ಬೆಲೆ ಎರ್ರಾಬಿರ್ರಿಯಾಗಿ ಮೇಲೇರಿದ್ದಕ್ಕೆ ಕೆಲವು ಉದ್ಯಮ ಕಂಪನಿಗಳು ಇವುಗಳ ಮೇಲೆ ತಮ್ಮ ದೃಷ್ಟಿ ಹರಿಸಿದ್ದೇ ಕಾರಣವೆಂಬುದು ಬಲ್ಲವರ ಹೇಳಿಕೆ. ಈಗಾಗಲೇ ವೈಶ್ಯ ಬ್ಯಾಂಕ್ ಇಂಥ ಸಂಕಷ್ಟದಿಂದ ಪಾರಾಗಲು ಬದಲೀ ಮಾರ್ಗವೊಂದನ್ನು ಹುಡುಕಿಕೊಂಡಿದೆ. ಎಸ್ಸಾರ್ ಗುಂಪಿನ ರುಯಾ ಕುಟುಂಬಕ್ಕೆ ಎಂಬತ್ತು ಸಾವಿರ ಷೇರುಗಳನ್ನು ತಾನಾಗಿ ನೀಡಿದೆ. ಬ್ಯಾಂಕುಗಳನ್ನು ಸ್ಥಾಪಿಸಲು ಆಸಕ್ತರಾದವರೆಲ್ಲ ಈಗಿರುವ ಖಾಸಗಿ ಬ್ಯಾಂಕುಗಳು ಹೊಂದಿರುವ ಅಪಾರ ಠೇವಣಿ, ಅವುಗಳ ಸುನಾಮ-ಇವುಗಳಿಂದ ಆಕರ್ಷಿತರಾಗಿದ್ದಾರೆ. ಈ ದೃಷ್ಟಿಯಿಂದ ಬರಲಿರುವ ದಿನಗಳಲ್ಲಿ ಬ್ಯಾಂಕುಗಳು ತಮ್ಮ ಬಂಡವಾಳ ಅಗತ್ಯಗಳನ್ನು ಹೇಗೆ ಪೂರೈಸಿಕೊಳ್ಳುತ್ತವೆ ಎಂಬುದು ಕುತೂಹಲಕರವಾಗಿದೆ.

## ವಿಶೇಷ ನ್ಯಾಯಮಂಡಲಿಗಳ ಸ್ಥಾಪನೆ

ಬ್ಯಾಂಕುಗಳಲ್ಲಿ ದೀರ್ಘಕಾಲದಿಂದ ವಸೂಲಾಗದೆ ಉಳಿದಿರುವ ಬಾಕಿಹಣದ ವಸೂಲಿ ಕೆಲಸವನ್ನು ಚುರುಕುಗೊಳಿಸಲು, ಮತ್ತು ಇವಕ್ಕೆ ಸಂಬಂಧಪಟ್ಟ ವ್ಯಾಜ್ಯಗಳನ್ನು ತುರ್ತಾಗಿ ಬಗೆಹರಿಸಲು ವಿಶೇಷ ನ್ಯಾಯ ಮಂಡಲಿಗಳನ್ನು ಸ್ಥಾಪಿಸುವಂತೆ ಸಮಿತಿ ಶಿಫಾರಸು ಮಾಡಿದೆ. ಸಾರ್ವಜನಿಕ ವಲಯದ ಬ್ಯಾಂಕುಗಳಿಗೆ ಕೈಗಾರಿಕೆಗಳಿಂದ ಬಾಕಿ ಇರುವ ಹಣದ ಮೊತ್ತ 20,000 ಕೋಟಿ ರೂ.ಗಳಿಗೂ ಹೆಚ್ಚು ಎಂದು ಬ್ಯಾಂಕು ಅಧಿಕಾರಿಗಳ ಸಂಘಟನೆಯೊಂದು ಹೇಳಿದೆ. ಸರ್ಕಾರ ದೃಢಸಂಕಲ್ಪ ಮಾಡಿ, ರಾಜಕೀಯವನ್ನು ಬದಿಗೊತ್ತಿ, ಬ್ಯಾಂಕ್ ಸಾಲವಸೂಲಿಗೆ ವಿಶೇಷ ಕ್ರಮ ಕೈಗೊಳ್ಳದಿದ್ದ ಪಕ್ಷದಲ್ಲಿ ನ್ಯಾಯಮಂಡಲಿಗಳನ್ನು ಸ್ಥಾಪಿಸಿಯೂ ಲಾಭವಾಗದು. ನೆರೆದೇಶ ಪಾಕಿಸ್ತಾನದಲ್ಲಿಬ್ಯಾಂಕುಗಳಿಗೆ ಸಾಲಬಾಕಿ ಉಳಿಸಿಕೊಂಡವರು ಚುನಾವಣೆಗಳಲ್ಲಿ ಸ್ಪರ್ಧಿಸುವಂತಿಲ್ಲವೆಂಬ ನಿಯಮ ಜಾರಿಗೆ ಬಂದಿದೆ. ನಮ್ಮಲ್ಲೂ ಇಂಥ ಕೆಲವು ಕ್ರಮಗಳು ಜಾರಿಗೆ ಬರಬೇಕಾಗಿದೆ.

## ಬ್ಯಾಂಕುಗಳ ಪುನಸ್ಸಂಘಟನೆ

ಬ್ಯಾಂಕುಗಳ ಸಂಖ್ಯೆ ಭಾರತದಲ್ಲಿ ಹೆಚ್ಚಾಗಿರುವುದನ್ನು ಗಮನಿಸಿರುವ ನರಸಿಂಹಂ ಸಮಿತಿಯು ಬ್ಯಾಂಕುಗಳನ್ನು ಪುನಸ್ಸಂಘಟಿಸಬೇಕೆಂದು ಸೂಚಿಸಿದೆ. ನಾಲ್ಕೈದು ಅಂತರರಾಷ್ಟ್ರೀಯ ಮಟ್ಟದ ಬ್ಯಾಂಕುಗಳು, ಎಂಟು-ಹತ್ತು ರಾಷ್ಟ್ರಮಟ್ಟದ ಬ್ಯಾಂಕುಗಳು ಸಾಕೆಂಬುದು ಅದರ ಸೂಚನೆ. ನ್ಯೂ ಬ್ಯಾಂಕ್ ಆಫ್ ಇಂಡಿಯಾವನ್ನು ಪಂಜಾಬ್ ನ್ಯಾಷನಲ್ ಬ್ಯಾಂಕಿನೊಂದಿಗೆ ವಿಲೀನಗೊಳಿಸುವ ಮೂಲಕ ಸರ್ಕಾರ ಈ ಪ್ರಕ್ರಿಯೆಯನ್ನು ಆರಂಭಿಸಿದೆ. ಭಾರತೀಯ ಸ್ಟೇಟ್ ಬ್ಯಾಂಕಿನ ಸಹವರ್ತಿ ಬ್ಯಾಂಕುಗಳನ್ನೆಲ್ಲ ಒಂದಾಗಿ ಸೇರಿಸುವ ಯೋಜನೆ ಸರ್ಕಾರದ ತೀವ್ರ ಪರಿಶೀಲನೆಯಲ್ಲಿದೆ. ಪ್ರಾಯಶಃ ಉಳಿದೆಲ್ಲ ಬ್ಯಾಂಕುಗಳೂ ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್‌ನೊಂದಿಗೆ ವಿಲೀನಗೊಳ್ಳಬಹುದು.

ಈ ಕ್ರಮದಲ್ಲಿ ಇರುವ ಒಂದೇ ಒಂದು ತೊಂದರೆ ನೌಕರರದು. ಎರಡು ಬ್ಯಾಂಕುಗಳನ್ನು ವಿಲೀನಗೊಳಿಸಿದಾಗ ದೊಡ್ಡ ಬ್ಯಾಂಕಿನವರು ಚಿಕ್ಕ ಬ್ಯಾಂಕಿನ ನೌಕರರನ್ನು ಮಲತಾಯಿ ಧೋರಣೆಯಿಂದ ನೋಡುತ್ತಾರೆಂದು ಸಂಬಂಧಪಟ್ಟವರಿಗೆ ಭಯ. ಹಾಗಾಗದಂತೆ ನೋಡಿಕೊಳ್ಳಬೇಕಾದ್ದು ಸರ್ಕಾರದ ಜವಾಬ್ದಾರಿ.

## ಲೈಸೆನ್ಸ್ ಪದ್ಧತಿ ರದ್ದು

ಶಾಖಾ ಲೈಸೆನ್ಸ್ ನೀಡಿಕೆ ಪದ್ಧತಿಯನ್ನು ರದ್ದು ಮಾಡಿ, ಶಾಖೆಗಳನ್ನು ತೆರೆಯುವ/ಮುಚ್ಚುವ/ಮರುಹೊಂದಾಣಿಕೆ ಮಾಡುವ ಸ್ವಾತಂತ್ರ್ಯವನ್ನುಬ್ಯಾಂಕುಗಳಿಗೇ ಬಿಟ್ಟುಕೊಡಬೇಕೆಂದು ನರಸಿಂಹಂ ಸಮಿತಿ ಶಿಫಾರಸು ಮಾಡಿದೆ. ನಷ್ಟದಲ್ಲಿ ನಡೆಯುತ್ತಿರುವ ಶಾಖೆಗಳನ್ನು ಮುಚ್ಚಿ, ಲಾಭದಲ್ಲಿ ನಡೆಯುತ್ತಿರುವ ಶಾಖೆಗಳತ್ತ ಬ್ಯಾಂಕುಗಳು ಹೆಚ್ಚು ಗಮನ ಹರಿಸಲು ಇದರಿಂದ ಸಾಧ್ಯವಾಗಬಹುದು. ತನ್ನ ಕೆಲವು ಶಾಖೆಗಳನ್ನುಮರುಹೊಂದಾಣಿಕೆಮಾಡುತ್ತಿರುವುದಾಗಿ ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ ಈಗಾಗಲೇ ಪ್ರಕಟಿಸಿದೆ. ಇಂತಹ ಕ್ರಮಗಳು ಸ್ವಾಗತಾರ್ಹವಾದರೂ ಇದರಿಂದ ನಷ್ಟಕ್ಕೊಳಗಾಗುವವರು ಗ್ರಾಮೀಣ ಬ್ಯಾಂಕ್ ಗ್ರಾಹಕರೇ ಆದರೆ ಅಷ್ಟರ ಮಟ್ಟಿಗೆ ಇವುಗಳನ್ನು ವಿರೋಧಿಸಬೇಕಾಗಬಹುದು.

### ಗಣಕೀಕರಣ

ಗ್ರಾಹಕರಿಗೆ ಉತ್ತಮ ಸೌಲಭ್ಯಗಳನ್ನು ಒದಗಿಸಲು ಮತ್ತು ಆಡಳಿತದ ವಿಷಯದಲ್ಲಿ ತಂತ್ರಜ್ಞಾನದ ಪೂರ್ಣಲಾಭ ಪಡೆಯಲು ಗಣಕೀಕರಣಕ್ಕೆ ಹೆಚ್ಚಿನ ಒತ್ತು ಕೊಡಬೇಕೆಂದು ಸಮಿತಿ ಶಿಫಾರಸು ಮಾಡಿದೆ. ಅಕ್ಟೋಬರ್ 93ರಲ್ಲಿ ಬ್ಯಾಂಕ್ ನೌಕರರ ಸಂಘಟನೆಗಳೊಂದಿಗೆ ಐ.ಬಿ.ಎ. ಮಾಡಿಕೊಂಡ ಒಪ್ಪಂದವು ಗಣಕೀಕರಣದಲ್ಲಿ ಒಂದು ಮಹತ್ವದ ಹೆಜ್ಜೆಯಾಗಿದೆ. ಇದರಿಂದಾಗಿ ಬ್ಯಾಂಕ್ ಗ್ರಾಹಕರಿಗೆ ಅತ್ಯುತ್ತಮ ಸೇವೆ ದೊರೆಯಲಿದೆ ಎಂದು ನಿರೀಕ್ಷಿಸಬಹುದು.

### ಮೇಲ್ವಿಚಾರಣಾ ಮಂಡಲಿ ರಚನೆ

ಭಾರತೀಯ ರಿಸರ್ವ್ ಬ್ಯಾಂಕಿನ ಅಧೀನದಲ್ಲಿ, ಆದರೆ ಕೇಂದ್ರ ಬ್ಯಾಂಕಿನ ಕರ್ತವ್ಯಗಳಿಗೆ ಹೊರತಾದ, ಬ್ಯಾಂಕಿಂಗ್ ಮೇಲ್ವಿಚಾರಣಾ ಮಂಡಲಿಯೊಂದನ್ನು ರಚಿಸುವಂತೆ ಸಮಿತಿ ಸಲಹೆ ಮಾಡಿದೆ. ಈ ಮಂಡಲಿಯು ಬ್ಯಾಂಕುಗಳ ಆಡಳಿತಾತ್ಮಕ ವ್ಯವಹಾರಗಳನ್ನು ನಿಯಂತ್ರಿಸುವ ಬದಲು ಬ್ಯಾಂಕಿಂಗ್ ವ್ಯವಸ್ಥೆಯನ್ನು ಸೂಕ್ತ ಮಾರ್ಗದರ್ಶನದ ಮೂಲಕ ನಿಯಂತ್ರಿಸಬೇಕು ಎಂಬುದು ಸಮಿತಿಯ ಅಪೇಕ್ಷೆ.

ಗಮನಾರ್ಹ ಸಂಗತಿ ಎಂದರೆ ಇಂಥ ಮಂಡಲಿಯ ಮೇಲ್ವಿಚಾರಣೆಯು, ಭಾರತೀಯ ರಿಸರ್ವ್ ಬ್ಯಾಂಕಿನ ಈಗಿನ ಮೇಲ್ವಿಚಾರಣೆಗಿಂತ ಯಾವ ರೀತಿಯಲ್ಲಿ ಭಿನ್ನವಾಗಿರುತ್ತದೆ ಎಂಬ ಕಲ್ಪನೆ ಯಾರಿಗೂ ಇದ್ದಂತಿಲ್ಲ. ಭಾರತೀಯ ರಿಸರ್ವ್ ಬ್ಯಾಂಕನ್ನು ಇನ್ನೂ ಒಂದು ಸ್ವಾಯತ್ತ ಸಂಸ್ಥೆಯಾಗಿ ಮಾಡದಿರುವುದು, ಮತ್ತು ಬ್ಯಾಂಕುಗಳ ಮೇಲ್ವಿಚಾರಣೆಯಲ್ಲಿ ಹಣಕಾಸು ಇಲಾಖೆ ಮೂಗು ತೂರಿಸುತ್ತಿರುವುದು—ಇವೇ ಬ್ಯಾಂಕುಗಳ ಸಮಗ್ರ ಮೇಲ್ವಿಚಾರಣೆಗೆ ಅಡ್ಡಿಯಾಗಿವೆ. ಇಂಥ ಸಂದರ್ಭದಲ್ಲಿ ರಚಿಸಲಾಗುತ್ತಿರುವ ಈ ಬ್ಯಾಂಕಿಂಗ್ ಮೇಲ್ವಿಚಾರಣಾ ಮಂಡಲಿಯ ಕಾರ್ಯವ್ಯಾಪ್ತಿಯನ್ನು, ಹಕ್ಕು–ಅಧಿಕಾರಗಳನ್ನು ಆದಷ್ಟು ಬೇಗ ಸ್ಪಷ್ಟಗೊಳಿಸುವುದು ತೀರಾ ಅಗತ್ಯವಾಗಿದೆ.

### ಆಸ್ತಿ ಪುನರ್ನಿರ್ಮಾಣ ನಿಧಿ ಸ್ಥಾಪನೆ

ಬ್ಯಾಂಕುಗಳ ಕರಡು ಮತ್ತು ಅನುಮಾನ ಋಣಗಳನ್ನು ವಟಾಯಿತ ದರದಲ್ಲಿ ಪಡೆದುಕೊಳ್ಳಲು ಒಂದು ಆಸ್ತಿ ಪುನರ್ನಿರ್ಮಾಣ ನಿಧಿ ಸ್ಥಾಪಿಸಬೇಕೆಂದು ಸಮಿತಿ ಸೂಚಿಸಿದೆ. ಇದೊಂದು ಸ್ವಾಗತಾರ್ಹ ಶಿಫಾರಸು.

### ಏಕರೂಪ ಲೆಕ್ಕ ಪದ್ಧತಿ

ಬ್ಯಾಂಕುಗಳೆಲ್ಲ ಏಕರೂಪ ಲೆಕ್ಕಪದ್ಧತಿಯನ್ನು ಅನುಸರಿಸುವಂತೆ ಸಮಿತಿ ಶಿಫಾರಸು ಮಾಡಿದೆ. ಅದರಲ್ಲೂ ಮುಖ್ಯವಾಗಿ ಆದಾಯ ಗುರುತಿಸುವಿಕೆ, ಆಸ್ತಿ ವರ್ಗೀಕರಣ, ನಷ್ಟಗಳಿಗಾಗಿ ಉಪಬಂಧ, ವಿನಿಯೋಜನೆಗಳ ಮೌಲ್ಯಮಾಪನ—ಮುಂತಾದ ವಿಷಯಗಳಲ್ಲಿ ಏಕರೂಪ ಲೆಕ್ಕ ಪದ್ಧತಿ ಅನುಸರಿಸಬೇಕಾದ್ದು ಅಗತ್ಯವೆಂಬುದನ್ನು ಸಮಿತಿ ಮನಗಂಡಿದೆ.

ಬ್ಯಾಂಕುಗಳು ತಮ್ಮ ವಿನಿಯೋಜನೆಗಳನ್ನು ಶಾಶ್ವತ ಮತ್ತು ಚಾಲ್ತಿ ವಿನಿಯೋಜನೆಗಳೆಂದು ವಿಂಗಡಿಸಬೇಕು. 1992–93ರಿಂದ ಶಾಶ್ವತ ವಿನಿಯೋಜನೆಗಳ ಪ್ರಮಾಣ ಒಟ್ಟು ವಿನಿಯೋಜನೆಗಳ ಶೇ. 70ಕ್ಕೆ ಮೀರಬಾರದು. ಶಾಶ್ವತ ವಿನಿಯೋಜನೆಗಳನ್ನು ಮನಬಂದಂತೆ ಮಾರಬಾರದು. ಮಾರಿದಾಗ ಸಂಭವಿಸುವ ನಷ್ಟವನ್ನು ಲೆಕ್ಕದಿಂದ ವಜಾ ಮಾಡಬೇಕು. ಲಾಭವಾದ ಪಕ್ಷದಲ್ಲಿ ಅದನ್ನು ಬಂಡವಾಳ ಮೀಸಲಿಗೆ ಸೇರಿಸತಕ್ಕದ್ದು. ಸಾಲ, ನಗದು ಉದರಿ, ಮೀರೆಳೆತ ಮತ್ತು ಖರೀದಿಸಿದ/ವಟಾಯಿಸಿದ ಹುಂಡಿಗಳನ್ನು ಆಸ್ತಿಗಳೆಂದು ಪರಿಗಣಿಸಬೇಕು. ಸಾಲಗಾರರ ಹೊಣೆ 25,000/-ರೂ.ಗಳಿಗಿಂತ ಹೆಚ್ಚಾದ ಪಕ್ಷದಲ್ಲಿ ಇಂಥ ಆಸ್ತಿಗಳನ್ನು ಅವುಗಳಿಂದ ವರಮಾನ ಬರುವ/ಬಾರದಿರುವ ಆಧಾರದ ಮೇಲೆ ನಾಲ್ಕು ಭಾಗಗಳಾಗಿ ವಿಂಗಡಿಸಿ, ತಕ್ಕ ಉಪಬಂಧ ಮಾಡುವಂತೆ ಸಮಿತಿ ಸೂಚಿಸಿದೆ.

ಈ ಸೂಚನೆಗನುಗುಣವಾಗಿ 1992–93ರ ಲೆಕ್ಕವನ್ನು ಬ್ಯಾಂಕುಗಳು ತಯಾರಿಸಿರುವುದರಿಂದ ಹೆಚ್ಚಿನ ಸಾರ್ವಜನಿಕ ವಲಯದ ಬ್ಯಾಂಕುಗಳು ನಷ್ಟ ತೋರಿಸಿವೆ. ಇದು ಇನ್ನೂ ಕೆಲವು ವರ್ಷಗಳ ಕಾಲ ಮುಂದುವರಿದೀತು. ಆದರೆ ದೀರ್ಘಾವಧಿಯಲ್ಲಿ ಈ ಏಕರೂಪ ಲೆಕ್ಕ ಪದ್ಧತಿಯಿಂದ ಬ್ಯಾಂಕುಗಳ ನೈಜ ಚಿತ್ರಣ ತಿಳಿಯಲಿದೆ. ಬ್ಯಾಂಕುಗಳು ಕೂಡ ತಮ್ಮ ಯಾವ ಚಟುವಟಿಕೆ ಲಾಭಪ್ರದವಾಗಿಲ್ಲ ಎಂಬುದನ್ನು ಪತ್ತೆಹಚ್ಚಿ ಅಗತ್ಯಕ್ರಮಗಳನ್ನು ಕೈಗೊಳ್ಳಲು ಅನುಕೂಲಕರವಾಗಲಿದೆ.

ಬ್ಯಾಂಕುಗಳ ರಾಷ್ಟ್ರೀಕರಣದ ಸರಿಸುಮಾರು 25 ವರ್ಷಗಳ ನಂತರ ಸರ್ಕಾರ ಬ್ಯಾಂಕಿಂಗ್ ವ್ಯವಸ್ಥೆಯ ಸಮಗ್ರ ಪುನರ್ರಚನೆಯತ್ತ ಗಮನ ಹರಿಸಿರುವುದು ಸ್ವಾಗತಾರ್ಹವಾಗಿದೆ. ಆದರೆ, ಖಾಸಗಿ ಮತ್ತು ವಿದೇಶಿ ಬ್ಯಾಂಕುಗಳಿಗೆ ಹೋಲಿಸಿದರೆ ಸಾರ್ವಜನಿಕ ವಲಯದ ಬ್ಯಾಂಕುಗಳು ನಿರ್ಬಂಧಿತ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸಬೇಕಾಗಿದೆ. ಈ ಬ್ಯಾಂಕುಗಳಿಗೆ ನೀತಿ ನಿರ್ಧಾರಗಳನ್ನು ತಾವೇ ತೆಗೆದುಕೊಳ್ಳುವ ಸ್ವಾತಂತ್ರ್ಯವಿಲ್ಲ. ಈ ಬ್ಯಾಂಕುಗಳ ಉನ್ನತ ಹುದ್ದೆಗಳನ್ನು ತುಂಬುವಲ್ಲಿ ಕೇಂದ್ರ ಸರ್ಕಾರ ಅನುಸರಿಸುತ್ತಿರುವ ಮಾನದಂಡ ಪ್ರಶ್ನಾರ್ಹವಾಗಿದೆ. ಬ್ಯಾಂಕುಗಳ ಅತಿ ಮುಖ್ಯ ಕೆಲಸವಾದ ಸಾಲ ನೀಡಿಕೆಯಲ್ಲಿ ರಾಜಕೀಯ ಹಸ್ತಕ್ಷೇಪ, ಭ್ರಷ್ಟಾಚಾರ ಮುಂತಾದ ಕಿರುಕುಳಗಳಿವೆ. ಸರ್ಕಾರ ಆರಂಭಿಸುವ ಹಲವಾರು ಯೋಜನೆಗಳಲ್ಲಿ, ತಮಗೆ ಯಾವ ಲಾಭವೂ ಇಲ್ಲದಿದ್ದರೂ, ಈ ಬ್ಯಾಂಕುಗಳು ಪಾಲ್ಗೊಳ್ಳುವಂತೆ ಮಾಡಲಾಗಿದೆ. ಭಿನ್ನಕ ಬಡ್ಡಿದರ ಯೋಜನೆ, ಆದ್ಯತಾ ವಲಯಕ್ಕೆ ನೆರವು—ಇವೆಲ್ಲ ಈ ಬ್ಯಾಂಕುಗಳ ಲಾಭ ಕಡಿಮೆಯಾಗುವಲ್ಲಿ ಗಣನೀಯ ಪಾತ್ರ ವಹಿಸಿವೆ. 1969 ರಿಂದ 1992ರ ವರೆಗಿನ ಅವಧಿಯಲ್ಲಿ ಈ ಬ್ಯಾಂಕುಗಳನ್ನು 'ಪವಿತ್ರ ಗೋವು'ಗಳಂತೆ ನಡೆಸಿಕೊಂಡ ಸರ್ಕಾರ ಇದ್ದಕ್ಕಿದ್ದಹಾಗೆ 'ಲಾಭ ಗಳಿಸಿ—ಇಲ್ಲವೇ ಬಾಗಿಲು ಮುಚ್ಚಿ' ಎಂದು ಬೆದರಿಸುತ್ತಿದೆ.

[17ನೇ ಪುಟ ನೋಡಿ

# ಬ್ಯಾಂಕುಗಳ ಆದಾಯ ಗುರುತಿಸುವಿಕೆ ಮತ್ತು ಆಸ್ತಿಗಳ ವರ್ಗೀಕರಣ

**ಶ್ರೀನಿವಾಸ ಗಟ್ಟು**

ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್, ಮುಖ್ಯ ಶಾಖೆ, ರಾಯಚೂರು

'ತೋಟ ಶೃಂಗಾರ; ಒಳಗೆ ಗೋಣಿಸೊಪ್ಪು' ಎಂಬ ಗಾದೆಯಂತೆ ಒಳಗೊಳಗೇ ವ್ಯಾಧಿಗ್ರಸ್ತವಾಗುತ್ತಿದ್ದರೂ ಪ್ರಭುತ್ವ ಬಲದಿಂದ ಆರೋಗ್ಯದ ರಂಗು ಬಳಿದುಕೊಂಡಿದ್ದ ಬ್ಯಾಂಕುಗಳ ವಾಸ್ತವಸ್ಥಿತಿ ಈಗ ಸರ್ವಜನವೇದ್ಯ. ಆದರೆ ಇದು ಕೂಡ ಶೀಘ್ರವಾಗಿ ಬದಲಾಗುತ್ತಿದೆ. ಬ್ಯಾಂಕುಗಳ ಆದಾಯ ಏರಿಕೆ ಮತ್ತು ಆಸ್ತಿಗಳ ಗುಣಮಟ್ಟದ ಕಡೆಗೆ ಗಮನ ನೀಡಬೇಕಾಗಿರುವ ಬ್ಯಾಂಕುಗಳು ಈಗ ಸ್ವಾಸ್ಥ್ಯದತ್ತ ನಡೆಯಲೇಬೇಕಾಗಿದೆ. ಇದೂ ಒಂದು ಬಗೆಯ ಸಾಮೂಹಿಕ ಯಜ್ಞ.

ಹಳೆಯ ಹೈದರಾಬಾದ್ ಕರ್ನಾಟಕ ಪ್ರದೇಶದ ಒಂದು ಆಡು ಮಾತಿದೆ, "ಊಪರ್ ಶೇರವಾನಿ; ಅಂದರ್ ಪರೇಶಾನಿ" ಎಂದು. ಒಳಗಿನ ಹರಕು ಅಂಗಿಯ ಲೋಪ ಮುಚ್ಚಿಕೊಳ್ಳಲು ಮೇಲೆ ಬಣ್ಣದ ಶೇರವಾನಿ ತೊಟ್ಟುಕೊಂಡು 'ಝುಂ' ಎನ್ನುತ್ತ ಎದೆಸೆಟಸಿ ನಡೆಯೋದು ಎಂದು ಈ ಮಾತಿನ ಅರ್ಥ. ಈ ಬಣ್ಣದ ಶೇರವಾನಿ ಎಂಬುದು ತನ್ನ ಸಹಜ ಉಡುಪಿನ ಲೋಪ ಮುಚ್ಚಲು ಆ ವ್ಯಕ್ತಿ ಬಳಸಿರುವ 'ಜಾಣ' ಮೇಲು ಹೊದಿಕೆ! ಭಾರತೀಯ ಬ್ಯಾಂಕುಗಳು ಈಗ ಈ ಬಣ್ಣದ ಶೇರವಾನಿಯನ್ನು ತೊಟ್ಟುಕೊಂಡಿವೆಯೇ? ಅವುಗಳ ಆಯ-ವ್ಯಯ ಪಟ್ಟಿಯಲ್ಲಿ ಕಾಣಬರುವ 'ಲಾಭಗಳಿಕೆ' ಹೂರಣಸಹಿತವಾದದ್ದೆ? ಅಥವಾ ಹುಸಿಯಾದದ್ದೆ? ಕೇಂದ್ರ ಸರ್ಕಾರದ ವಿಚಕ್ಷಕದೃಷ್ಟಿ ಈಗ ಬ್ಯಾಂಕುಗಳ ಒಳ ಅಂಗಿಯ ಮೇಲೆ ನೆಟ್ಟಿರುವುದಂತೂ ನಿಜ. ಆರ್ಥಿಕ ಮನ್ವಂತರದೆಡೆಯ ಅನೇಕ ಹೊಸ ಕ್ರಮಗಳನ್ನು ಈಗಾಗಲೇ ನರಸಿಂಹಂ ಸಮಿತಿ ಪ್ರಕಟಪಡಿಸಿದ್ದು, ಭಾರತೀಯ ರಿಸರ್ವ್ ಬ್ಯಾಂಕು ಆ ನಿಟ್ಟಿನಲ್ಲಿ ತುಂಬಾ ಕ್ರಮಬದ್ಧವಾದ ಕಾರ್ಯಕ್ರಮಗಳನ್ನು ಜಾರಿಗೆ ತರುತ್ತಿದೆ. ಇದರ ಮೂರು ಮಜಲುಗಳನ್ನು ಹೀಗೆ ಕಾಣಬಹುದು:

**ಮಜಲು ಒಂದು**

1992ರ ಏಪ್ರಿಲ್ ಒಂದರಿಂದ ಜಾರಿಗೆ ಬಂದಿರುವ ಮೂರು ವರ್ಷಗಳ ಅವಧಿಯ ಕ್ರಮ ಬ್ಯಾಂಕುಗಳ ಆರ್ಥಿಕ ಸ್ಥಿತಿಗತಿಯ ಸ್ಪಷ್ಟ ಚಿತ್ರಣಕ್ಕೆ ಒಂದು ಹೊಸ ಆಯಾಮವನ್ನೇ ಒದಗಿಸುತ್ತಲಿದೆ. ಆದಾಯ ಗಳಿಸಿದ್ದೆಷ್ಟು? ಗಳಿಸಿದ್ದೆಂದು ಭಾವಿಸಿದ ಆದಾಯ ಕೈಗೆ ಬಂದದ್ದೆಷ್ಟು? ಕೈಗೆ ಬಾರದಿದ್ದರೂ ಪುಸ್ತಕದಲ್ಲಿ ಗಳಿಸಿದ್ದನ್ನೇ 'ಆದಾಯ'ದ ಲೆಕ್ಕಕ್ಕೆ ಜಮಾ ಮಾಡಿ 'ವರ್ಷಕ್ಕೆ ನಾವಿಷ್ಟು ಲಾಭ ಮಾಡಿಕೊಂಡಿದ್ದೇವೆ' ಎಂದು ಜಾಹೀರು ಮಾಡುತ್ತ ಕಾಲರು (ಬಿಳಿಯ?) ಕುಣಿಸಿ ಬೀಗಿಕೊಳ್ಳುತ್ತಿದ್ದ ಬ್ಯಾಂಕುಗಳು ಈಗ ಈ ಕ್ರಮಗಳನ್ನೆಲ್ಲ ಎದುರಿಸಿ ನಿಲ್ಲಬೇಕಾಗಿದೆ. ಅವು ಅನುಸರಿಸಬೇಕಾದ ಪದ್ಧತಿಗಳನ್ನು ಮೂರು ವಿಧದಲ್ಲಿ ವಿಂಗಡಿಸಲಾಗಿದೆ:

(1) ಆದಾಯ ಗುರುತಿಸುವಿಕೆ
(2) ಆಸ್ತಿಗಳ ವರ್ಗೀಕರಣ
(3) ಉಪಬಂಧ

ಆದಾಯ ಗುರುತಿಸುವ ಪ್ರಕ್ರಿಯೆ ಬ್ಯಾಂಕಿನ ಆಸ್ತಿಗಳ ಅವಸ್ಥೆಯನ್ನು ಅವಲಂಬಿಸಿದೆ. ಆಸ್ತಿಗಳ ಅವಸ್ಥೆ ಎಂದರೆ ಅವು ಕ್ರಿಯಾಶೀಲವಾಗಿವೆಯೆ ಅಥವಾ ನಿಷ್ಕ್ರಿಯವಾಗಿವೆಯೆ ಎಂಬುದು. ಆಸ್ತಿಗಳ ನಿಷ್ಕ್ರಿಯತೆಯನ್ನು ಪರಿಗಣಿಸಲು ನಿರ್ದೇಶನ ಸೂತ್ರಗಳನ್ನು ಜಾರಿ ಮಾಡುತ್ತ ಭಾರತೀಯ ರಿಸರ್ವ್ ಬ್ಯಾಂಕು ಅಂಥ ನಿಷ್ಕ್ರಿಯ ಆಸ್ತಿಗಳ ಮೇಲೆ 'ಪುಸ್ತಕದಲ್ಲಿ ಗಳಿಸಿದ' ಬಡ್ಡಿಯನ್ನು 'ಆದಾಯ ಲೆಕ್ಕಕ್ಕೆ' ಸೇರಿಸದೇ ಇರಲು ಸೂಚನೆಯನ್ನು ಕೂಡ ಕೊಡಮಾಡಿದೆ.

ಬ್ಯಾಂಕಿನ ಅವಧಿ ಸಾಲ, ನಗದು-ಉದರಿ ಖಾತೆ, ಮಿರೆಳೆತ ಮುಂತಾದ ಖಾತೆಗಳ ನಿರ್ದಿಷ್ಟ ಕಂತುಗಳು

31-3-1993ರಲ್ಲಿನ 4 ತ್ರೈಮಾಸಿಕಗಳ ವರೆಗೆ
31-3-1994ರಲ್ಲಿನ 3 ತ್ರೈಮಾಸಿಕಗಳ ವರೆಗೆ
31-3-1995ರಲ್ಲಿನ 2 ತ್ರೈಮಾಸಿಕಗಳ ವರೆಗೆ

ಪಾವತಿಯಾಗದೆ ಇದ್ದಲ್ಲಿ ಅವನ್ನು 'ನಿಷ್ಕ್ರಿಯ ಆಸ್ತಿಗಳು' ಎಂದು ಪರಿಗಣಿಸಲು ಸೂಚಿಸಲಾಗಿದೆ. ಮೇಲಿನ ಮೂರು ಪ್ರಕಾರಗಳನ್ನು

ಸದ್ಯಕ್ಕೆ 'ನಿಗದಿತ ಹಂತ'ಗಳೆಂದು ಹೆಸರಿಸೋಣ. ಇವಕ್ಕೆ ಒಳಪಟ್ಟು ಯಾವ ಯಾವ ಖಾತೆಗಳು, ಯಾವ ಯಾವ ಸಂದರ್ಭಕ್ಕೆ 'ನಿಷ್ಕ್ರಿಯ'ಎಂದು ಕರೆಸಿಕೊಳ್ಳುತ್ತವೆ ಎಂಬುದನ್ನು ಈ ಕೆಳಕಂಡಂತೆ ಗುರುತಿಸಬಹುದು.

ಅವಧಿ ಸಾಲಗಳ ಮೊದಲ ಬಡ್ಡಿ ಕಂತು ಕಟ್ಟಬೇಕಾದ ದಿನಾಂಕದ ಗಡಿ ದಾಟಿದರೂ ಖಾತೆಗೆ ಯಾವುದೇ ಜಮಾ ಕೂಡ ಆಗಿಲ್ಲ ಎಂದಾಗ ಆ ದಿನಾಂಕದ ಗಡಿಯ ನಂತರವೂ ಮೂವತ್ತು ದಿನಗಳ ಅವಧಿಯನ್ನು ಹೆಚ್ಚುವರಿಯಾಗಿ ನೀಡಲಾಗುತ್ತದೆ. (ಈ ಹೆಚ್ಚುವರಿ ಅವಧಿ ಎಲ್ಲ ಖಾತೆಗಳಿಗೂ ಅನ್ವಯಿಸುತ್ತದೆ.) ಅನಂತರವೂ ಖಾತೆಗೆ ಬಡ್ಡಿಯ ಕಂತು ಜಮಾ ಆಗದಿದ್ದಲ್ಲಿ ಆ ಖಾತೆಗೆ 'ನಿಷ್ಕ್ರಿಯ ಖಾತೆ' ಎಂಬ ಹಣೆಪಟ್ಟಿ ಹಚ್ಚಬೇಕಾಗುತ್ತದೆ.

ನಗದು ಉದರಿ ಖಾತೆ ಮತ್ತು ಮೀರೆಳೆತ ಖಾತೆಗಳು ಮೇಲೆ ತಿಳಿಸಿದ 'ನಿಗದಿತ ಹಂತ'ಗಳಿಗೆ ಅನ್ವಯವಾಗುವಂತೆ ಕ್ರಮಬದ್ಧವಾದಲ್ಲವಾದರೆ ಅವನ್ನು ನಿಷ್ಕ್ರಿಯ ಆಸ್ತಿಗಳೆಂದು ಪರಿಗಣಿಸಬೇಕು. ಈ ಖಾತೆಗಳು 'ಕ್ರಿಯಾವಿಹೀನ' ಎಂದು ಈ ಕೆಳಗಿನ ಸಂದರ್ಭಗಳಲ್ಲಿ ಕರೆಸಿಕೊಳ್ಳುತ್ತದೆ :

1 ಇವುಗಳ ಮಂಜೂರಾದ ಮಿತಿ ಅಥವಾ ಮೀರೆಳೆತ ಮಿತಿಗಿಂತಲೂ ಖಾತೆಯಲ್ಲಿನ ಪ್ರಸ್ತುತ ಬಾಕಿಯು ನಿರಂತರವಾಗಿ ಅಧಿಕವಾಗಿಯೇ ಇದ್ದರೆ

2 ಪ್ರಸ್ತುತ ಬಾಕಿಯು ಮಂಜೂರಾದ ಮಿತಿ ಅಥವಾ ಮೀರೆಳೆತ ಮಿತಿಗಳ ಒಳಗೇ ಇದ್ದು, ನಿರಂತರವಾಗಿ ಆರು ತಿಂಗಳವರೆಗೆ ಖಾತೆಗೆ ಯಾವುದೇ ಜಮಾ ಆಗದಿದ್ದಲ್ಲಿ—(ಆ ವರ್ಷದ ಆಯವ್ಯಯ ಪಟ್ಟಿಯ ದಿನಾಂಕದ ತನಕ)

3 ಜಮಾ ಮಾಡಲ್ಪಟ್ಟ ಹಣ ಆ ಅವಧಿಯಲ್ಲಿ ಖಾತೆಗೆ ಋಣಿಸಿದ ಬಡ್ಡಿಯಷ್ಟಕ್ಕಾದರೂ ಸರಿಹೋಗದಿದ್ದಲ್ಲಿ.

ಹುಂಡಿಗಳ ಖರೀದಿ ಮತ್ತು ವಟಾಯಿಸಿದ ಹುಂಡಿಗಳು ಮೇಲೆ ತಿಳಿಸಿದ 'ನಿಗದಿತ ಹಂತ'ಗಳಿಗೆ ಅನ್ವಯವಾಗುವಂತೆ ಬಾಕಿ ಉಳಿದರೆ ಅಥವಾ ಪಾವತಿಯಾಗದೆ ಇದ್ದರೆ—ಅವನ್ನೂ 'ನಿಷ್ಕ್ರಿಯ ಆಸ್ತಿಗಳು' ಎಂದು ಪರಿಗಣಿಸಬೇಕು. ಆದರೆ ಕೃಷಿ ಸಾಲಗಳು ಸಾಮಾನ್ಯವಾಗಿ 'ಬೆಳೆ ಅವಧಿ'ಯ ಆಧಾರದ ಮೇಲೆ ನೀಡಲ್ಪಡುವುದರಿಂದ, ಇವುಗಳಿಗೆ ಎರಡು ಕೃಷಿ ಬೆಳೆಗಳ ಅವಧಿಯನ್ನು ಮಾನದಂಡವಾಗಿ ಬಳಸಲಾಗುತ್ತದೆ. ಈ ಅವಧಿಯ ನಂತರವೂ ಬಡ್ಡಿ ಪಾವತಿಯಾಗದೆ ಇರುವ ಕೃಷಿಸಾಲಗಳನ್ನು 'ನಿಷ್ಕ್ರಿಯ ಆಸ್ತಿ'ಗಳ ಪಟ್ಟಿಗೆ ಸೇರಿಸಲಾಗುತ್ತದೆ.

ಸಾಲ ಖಾತೆಗಳು ಹೀಗೆ ನಿಧಾನವಾಗಿ ನಿಷ್ಕ್ರಿಯ ಆಸ್ತಿಗಳಾಗಿ ಪರಿವರ್ತಿತಗೊಳ್ಳುವ ಪ್ರಕ್ರಿಯೆಯೊಂದಿಗೇ ಬ್ಯಾಂಕುಗಳ ಆದಾಯ ಗುರುತಿಸುವ ಕ್ರಿಯೆಯೂ ಇಲ್ಲಿ ಮಿಳಿತಗೊಂಡಿರುವುದನ್ನು ಗಮನಿಸಬಹುದು. ಈ ಖಾತೆಗಳು ಕ್ರಮೇಣ 'ಹೊರೆ'ಯಾಗಿಬಿಡುವ ಮುನ್ನವೆ ಬ್ಯಾಂಕುಗಳು ಎಚ್ಚೆತ್ತುಕೊಂಡು ಸೂಕ್ತವಾಗಿ ನಡೆದುಕೊಂಡರೆ ಆದಾಯದ ಗಟ್ಟಿ ಹೂರಣ ಕೈಗೆ ದಕ್ಕಲೂಬಹುದು.

### ಮಜಲು ಎರಡು

ಒಟ್ಟು ಎಂಟು ಸ್ವಾಸ್ಥ್ಯಸಂಕೇತಗಳ ಆಧಾರದ ಮೇಲೆ ಸಾಲಖಾತೆಗಳ ಸ್ಥಿತಿಗತಿ ಅಳೆಯುವ ಪದ್ಧತಿಯನ್ನು ಸಂಕ್ಷಿಪ್ತಗೊಳಿಸಿ, ಅಭಿವೃದ್ಧಿಪಡಿಸಿದಂತೆ ಕಂಡುಬರುವ 'ಆಸ್ತಿಗಳ ವರ್ಗೀಕರಣ' ಎಂಬುದು ಇಲ್ಲಿನ ಎರಡನೆಯ ಮಹತ್ವದ ಮಜಲು. ಈ ವರ್ಗೀಕರಣವನ್ನು ಹೀಗೆ ವಿವರಿಸಲಾಗಿದೆ :

1 ಶಿಷ್ಟ ಆಸ್ತಿಗಳು

2 ಅರೆ ಶಿಷ್ಟ ಆಸ್ತಿಗಳು

3 ಅನುಮಾನ ಆಸ್ತಿಗಳು ಮತ್ತು

4 ನಷ್ಟ ಆಸ್ತಿಗಳು

ಗ್ರಾಹಕನ ಉದರಿದೌರ್ಬಲ್ಯ ಮತ್ತು ಬಾಕಿಗಳ ಸಂಬಂಧ ಜಾಮೀನುದಾರರ ಮೇಲೆ ಬ್ಯಾಂಕುಗಳು ಎಷ್ಟರ ಮಟ್ಟಿಗೆ ಅವಲಂಬಿತವಾಗಿರಬಲ್ಲವು ಎಂಬ ಅಂಶಗಳು 'ಆಸ್ತಿಗಳ ವರ್ಗೀಕರಣ'ವನ್ನು ನಿರ್ಧರಿಸುತ್ತವೆ.

### ಶಿಷ್ಟ ಆಸ್ತಿಗಳು

ವ್ಯವಹಾರಕ್ಕೆ ಸಂಬಂಧಪಟ್ಟಂತೆ ಯಾವುದೇ ಸಮಸ್ಯೆಯನ್ನು ಹುಟ್ಟುಹಾಕದ ಮತ್ತು ಸಾಧಾರಣ ನಷ್ಟಭಯಕ್ಕಿಂತ ಹೆಚ್ಚಿನ ತೊಂದರೆಯನ್ನೇನೂ ಕೊಡದ ಸಾಲಖಾತೆಗಳೆಲ್ಲ ಶಿಷ್ಟ ಆಸ್ತಿಗಳೆಂದು ಕರೆಸಿಕೊಳ್ಳುತ್ತವೆ.

### ಅರೆ ಶಿಷ್ಟ ಆಸ್ತಿಗಳು

'ನಿಷ್ಕ್ರಿಯ ಆಸ್ತಿ' ಎಂದು ಗುರುತಿಸಲ್ಪಟ್ಟು, ಎರಡು ವರ್ಷಗಳ ಅವಧಿಯನ್ನು ದಾಟಿರದ ಖಾತೆಗಳನ್ನು 'ಅರೆ ಶಿಷ್ಟ ಆಸ್ತಿಗಳು' ಎಂದು ಕರೆಯಲಾಗುತ್ತದೆ. (ಆದಾಯ ಗುರುತಿಸುವ ಸಂದರ್ಭದಲ್ಲಿ ವಿಶೇಷವಾಗಿ ಸಾಲಖಾತೆಗಳ 'ಬಡ್ಡಿಯ ಕಂತು' ವಸೂಲಾತಿಯನ್ನು ಪ್ರಮುಖವಾಗಿ ಪರಿಗಣಿಸಿದರೆ, ಆಸ್ತಿಗಳ ವರ್ಗೀಕರಣ ಮಾಡುವ ಸಮಯದಲ್ಲಿ ಸಾಲ ಖಾತೆಗಳ 'ಅಸಲುಕಂತು' ವಸೂಲಾತಿಯನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ).

ಅರೆ ಶಿಷ್ಟ ಆಸ್ತಿಗಳೆಂದು ಕರೆಯಲ್ಪಟ್ಟ ಖಾತೆಗಳು ಸಾಲಗಾರನ ಅಥವಾ ಜಾಮೀನುದಾರನ ಪ್ರಸಕ್ತ ಒಟ್ಟು ಸಾಮರ್ಥ್ಯವಾಗಲಿ ಸಾಲಕ್ಕೆ ನೀಡಲ್ಪಟ್ಟ ಜಾಮೀನಿನ ಪ್ರಸಕ್ತ ಮಾರುಕಟ್ಟೆ ಬೆಲೆಯಾಗಲಿ—ಇವುಗಳು ಬ್ಯಾಂಕಿಗೆ ಕೊಡಬೇಕಾಗಿರುವ ಒಟ್ಟು ಬಾಕಿ ಮೊತ್ತವನ್ನು ಸಂಪೂರ್ಣವಾಗಿ ವಸೂಲು ಮಾಡುವ ಸಾಮರ್ಥ್ಯವನ್ನು ಹೊಂದಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಈ ಕೊರತೆಯನ್ನು ಸಕಾಲಕ್ಕೆ ನೀಗಿಸಿಕೊಳ್ಳದಿದ್ದರೆ, ಸಾಲಗಾರನ ದುರ್ಬಲ ಉದರಿ ಸಾಮರ್ಥ್ಯದಿಂದಾಗಿ—ಇಂಥ ಆಸ್ತಿಗಳು ಬಾಕಿ ತೀರಿಸುವ ಉದ್ದೇಶವನ್ನು ಅನಿಶ್ಚಿತ ಸ್ಥಿತಿಗೆ ತಳ್ಳುವುದರ ಮೂಲಕ ಬ್ಯಾಂಕುಗಳನ್ನು ನಷ್ಟದ ಹತ್ತಿರಕ್ಕೆ ಕೊಂಡೊಯ್ಯುತ್ತವೆ.

### ಅನುಮಾನ ಆಸ್ತಿಗಳು

ನಿಷ್ಕ್ರಿಯ ಆಸ್ತಿಗಳೆಂದು ಹಣೆಪಟ್ಟಿ ಹಚ್ಚಿಕೊಂಡೇ ಎರಡು ವರ್ಷ ಕಳೆದ ಖಾತೆಗಳನ್ನು 'ಅನುಮಾನ ಆಸ್ತಿ'ಗಳೆಂಬ ವರ್ಗಕ್ಕೆ ಸೇರಿಸ

ಲಾಗುತ್ತದೆ. ಇವು ಅರೆ–ಶಿಷ್ಟ ಆಸ್ತಿಗಳ ಎಲ್ಲ ದೌರ್ಬಲ್ಯಗಳನ್ನು ಧಾರಣ ಮಾಡಿರುತ್ತವಲ್ಲದೆ, ಇವುಗಳ ಪಾಲಿಗೆ ಪ್ರಸ್ತುತ ಪ್ರಸಂಗ, ಪ್ರಸ್ತುತ ಪರಿಸ್ಥಿತಿ ಮತ್ತು ಪ್ರಸ್ತುತ ಬೆಲೆ—ಎಲ್ಲವೂ ಪ್ರಶ್ನಾರ್ಥಕವಾಗಿಯೂ, ಕಷ್ಟ ಸಾಧ್ಯವಾಗಿಯೂ ಕಂಡುಬರುತ್ತವೆ.

### ನಷ್ಟ ಆಸ್ತಿಗಳು

ಇನ್ನು 'ನಷ್ಟ ಆಸ್ತಿಗಳ' ಲೆಕ್ಕಕ್ಕೆ ಸೇರಿಹೋಗುವ ಖಾತೆಗಳ ಗುಣ ಲಕ್ಷಣಗಳನ್ನು ಹೀಗೆ ವಿವರಿಸಬಹುದು : ಬ್ಯಾಂಕಿನ ಲೆಕ್ಕ ಪರಿಶೋಧಕರು, ಇಲ್ಲವೆ ಆಂತರಿಕ ಅಥವಾ ಬಾಹ್ಯ ಲೆಕ್ಕಪರಿಶೋಧಕರು, ಇಲ್ಲವೆ ಭಾರತೀಯ ರಿಸರ್ವ್ ಬ್ಯಾಂಕ್‌ನ ತಪಾಸಣಾ ತಂಡವು ನಿರ್ದಿಷ್ಟ ಖಾತೆಯೊಂದನ್ನು 'ನಷ್ಟದ ಬಾಬತ್ತು' ಎಂದು ಗುರುತಿಸಿದ್ದುದಲ್ಲದೇ, ಅದನ್ನು ಭಾಗಶಃ ಇಲ್ಲವೇ ಸಂಪೂರ್ಣವಾಗಿ ತೊಡೆದು ಹಾಕಿಲ್ಲದೇ (written off) ಇದ್ದಂತಹ ಪಕ್ಷದಲ್ಲಿ ಆ ಖಾತೆ 'ನಷ್ಟದ ಆಸ್ತಿ'ಯಾಗಿ ಎದ್ದು ನಿಲ್ಲುತ್ತದೆ!

ಈ 'ಆಸ್ತಿ ವರ್ಗೀಕರಣ' ಸಾಲದ ನಷ್ಟಗಳಿಗೆ ಉಪಬಂಧವನ್ನು (Provision) ನಿರ್ಧರಿಸಲು ಒಂದು ಆಧಾರವಾಗಿ ಬಳಸಲಾಗುತ್ತದೆಯೇ ಹೊರತು ಈಗಾಗಲೇ ಚಾಲ್ತಿಯಲ್ಲಿರುವ ಸ್ವಾಸ್ಥ್ಯ ಸಂಕೇತಗಳ ಬದಲಿಗೆ ಇವನ್ನು ಬಳಸುತ್ತಿಲ್ಲ. ವ್ಯವಸ್ಥಾಪನಾ ಮಾಹಿತಿಯ ಒಂದು ಸಾಧನವಾಗಿ ಸ್ವಾಸ್ಥ್ಯ ಸಂಕೇತ ಪದ್ಧತಿಯನ್ನು ಮುಂದುವರಿಸಲಾಗಿದೆ.

### ಮಜಲು ಮೂರು

ಕೊಡಲಾದ ಜಾಮೀನನ್ನು ಸಾಲಕ್ಕೆ ಸರಿದೂಗಿಸಿಕೊಳ್ಳಲು ಮತ್ತು ಜಾಮೀನಿನ ಮೌಲ್ಯದಲ್ಲಿ ಸಮಯದ ಜೊತೆಗೇ ಉಂಟಾಗುವ ಸವೆತ ಇವುಗಳನ್ನು ಹೊಂದಿಸಿಕೊಳ್ಳಲು ಅರೆ ಶಿಷ್ಟ ಆಸ್ತಿಗಳು, ಅನುಮಾನ ಆಸ್ತಿಗಳು ಮತ್ತು ನಷ್ಟ ಆಸ್ತಿಗಳ ವಿರುದ್ಧ ಸೂಕ್ತ ಉಪಬಂಧಗಳನ್ನು ರೂಪಿಸುವುದು ಮೂರನೆಯ ಪ್ರಮುಖ ಮಜಲು.

**ಒಂದು :** ಅರೆ ಶಿಷ್ಟ ಆಸ್ತಿಗಳಿಗೆ ಸಾಲದ ಪ್ರಸ್ತುತ ಬಾಕಿಯ ಮೇಲೆ ಶೇಕಡ 10ರಷ್ಟು ಸಾಧಾರಣ ಉಪಬಂಧವನ್ನು ಸೂಚಿಸಲಾಗಿದೆ.

**ಎರಡು :** ಅನುಮಾನ ಆಸ್ತಿಗಳ ಸಂಬಂಧ ಈ ಕೆಳಕಂಡಂತೆ ಉಪಬಂಧವನ್ನು ರೂಪಿಸಲು ಸೂಚಿಸಲಾಗಿದೆ :

(ಅ) ಜಾಮೀನಿನ ಮೌಲ್ಯವು ಸಾಲಕ್ಕೆ ಸರಿದೂಗುವ ತ್ರಾಣ ಹೊಂದಿಲ್ಲದಿದ್ದಲ್ಲಿ ಅಂಥ ಅನುಮಾನ ಆಸ್ತಿಗಳ ಮೇಲೆ ಶೇಕಡಾ 100 ರಷ್ಟು ಉಪಬಂಧದ ಅಗತ್ಯವಿದೆ.

(ಬ) ಅನುಮಾನ ಆಸ್ತಿಗಳೆಂದು ಗುರುತಿಸಲ್ಪಟ್ಟ ಅವಧಿಯ ಮೊದಲ ವರ್ಷದ ತನಕ ಶೇಕಡಾ 20, ಒಂದರಿಂದ ಮೂರು ವರ್ಷದ ತನಕ ಶೇಕಡಾ 30 ಮತ್ತು ಮೂರು ವರ್ಷ ಮೀರಿದ ಅವಧಿಗೆ ಶೇಕಡಾ 50ರಷ್ಟು ಉಪಬಂಧವನ್ನು ತೆಗೆದಿರಿಸಬೇಕು.

**ಮೂರು :** ನಷ್ಟದ ಆಸ್ತಿಗಳನ್ನು ಸಂಪೂರ್ಣವಾಗಿ ತೊಡೆದು ಹಾಕಬೇಕು. ಯಾವುದೇ ಕಾರಣದಿಂದಾಗಿ ಈ ಆಸ್ತಿಗಳು ಇನ್ನೂ ಬ್ಯಾಂಕ್ ಪುಸ್ತಕಗಳಲ್ಲಿ ಇರುವಂತಾಗಿದ್ದರೆ, ಅವಕ್ಕೆ ಶೇಕಡಾ 100 ರಷ್ಟು ಉಪಬಂಧವನ್ನು ತೆಗೆದಿರಿಸಬೇಕು. ಇನ್ನು ಶಿಷ್ಟ ಆಸ್ತಿಗಳಿಗೆ ಯಾವುದೇ ಉಪಬಂಧದ ಅಗತ್ಯವಿಲ್ಲ.

ಸಾಲದ ಬಡ್ಡಿ ಅಥವಾ ಅಸಲು ಕಂತುಗಳ ಸಕಾಲಿಕ ಪಾವತಿಯ ಮೇಲೆ ಜಾಗರೂಕ ನಿಗರಾಣಿ ಇಡಲು ಬ್ಯಾಂಕುಗಳು ಈಗಂತೂ ಕಟ್ಟೆಚ್ಚರ ವಹಿಸಬೇಕಾಗಿದೆ. ನಿಷ್ಕ್ರಿಯ ಆಸ್ತಿಗಳ ಸಂಬಂಧದ ಈ ಹೊಸ ಕ್ರಮಗಳು ಎಷ್ಟೊಂದು ಖಾರವಾಗಿವೆಯೆಂದರೆ 1992–93ರ ಅವಧಿಯಲ್ಲಿ ಬಹಳಷ್ಟು ದೊಡ್ಡ ಬ್ಯಾಂಕುಗಳು ಭಾರಿ ನಷ್ಟಕ್ಕೆ ಗುರಿಯಾದವು ಇಲ್ಲವೆ ಕಡಿಮೆ ಲಾಭವನ್ನು ಗಳಿಸಿದವು. ಭಾರತೀಯ ಸ್ಟೇಟ್ ಬ್ಯಾಂಕ್ ಒಂದನ್ನು ಹೊರತುಪಡಿಸಿದರೆ ಬಹುತೇಕ ಪ್ರಮುಖ ಬ್ಯಾಂಕುಗಳು ಇದರ ಪರಿಣಾಮವನ್ನು ತೀವ್ರವಾಗಿ ಎದುರಿಸಿವೆ. ಏಳು ಪ್ರಮುಖ ಬ್ಯಾಂಕುಗಳು ಕಳೆದೆರಡು ಸಾಲಿನಲ್ಲಿ ತೋರಿಸಿದ ಲಾಭ ನಷ್ಟದ ಕೋಷ್ಟಕವನ್ನು ಇಲ್ಲಿ ಗಮನಿಸಬಹುದು :

| ಕ್ರಮಾಂಕ | ಬ್ಯಾಂಕುಗಳು | (ಕೋಟಿ ರೂ.ಗಳಲ್ಲಿ) ನಿವ್ವಳ ಲಾಭ 1991–92 | ನಿವ್ವಳ ಲಾಭ 1992–93 |
|---|---|---|---|
| 1 | ಭಾರತೀಯ ಸ್ಟೇಟ್ ಬ್ಯಾಂಕ್ | 175.05 | 212.04 |
| 2 | ಕೆನರಾ ಬ್ಯಾಂಕ್ | 156.59 | 26.07 |
| 3 | ಬ್ಯಾಂಕ್ ಆಫ್ ಬರೋಡಾ | 94.50 | 8.23 |
| 4 | ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | 30.49 | –383.31 |
| 5 | ಬ್ಯಾಂಕ್ ಆಫ್ ಇಂಡಿಯಾ | ಲಭ್ಯವಿಲ್ಲ | –300.00 (ನಿರೀಕ್ಷಿತ) |
| 6 | ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾ | 29.45 | 11.26 |
| 7 | ಕಾರ್ಪೊರೇಶನ್ ಬ್ಯಾಂಕ್ | 5.20 | 4.12 |

ಈ ಅವಧಿಯಲ್ಲಿ ಕೆನರಾ ಬ್ಯಾಂಕು ಮತ್ತು ಬ್ಯಾಂಕ್ ಆಫ್ ಬರೋಡಾ ತಮ್ಮ ಲಾಭಗಳಿಕೆಯಲ್ಲಿ ಭಾರಿ ಪ್ರಮಾಣದ ಇಳಿಮುಖ ತೋರಿಸಿದವು. ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ ಆಘಾತಕರ ಅಂಕಿ–ಅಂಶಗಳನ್ನು ಹೊರಹಾಕಿತು. ಅದು ಕಳೆದ ಸಾಲಿನ 30.49 ಕೋಟಿ ರೂ.ಗಳ ಲಾಭದ ಸ್ಥಿತಿಯಿಂದ 303.31 ಕೋಟಿ ರೂ.ಗಳ ನಷ್ಟದ (1992–93) ಕಡೆಗೆ ಸಾಗಿತು. ಇನ್ನು ನ್ಯೂ ಬ್ಯಾಂಕ್ ಆಫ್ ಇಂಡಿಯಾದ ಪರಿಸ್ಥಿತಿ ಎಷ್ಟೊಂದು ದಯನೀಯವಾಯಿತೆಂದರೆ ಅದು ಮತ್ತೊಂದು ರಾಷ್ಟ್ರೀಕೃತ ಬ್ಯಾಂಕ್ ಜೊತೆ ವಿಲೀನಗೊಳ್ಳುವ ಹಂತ ತಲುಪಿತು. 75 ಕೋಟಿ ರೂ.ಗಳ ನಷ್ಟದ ಬಾಬತ್ತಿನೊಂದಿಗೆ ನ್ಯೂ ಬ್ಯಾಂಕ್ ಆಫ್ ಇಂಡಿಯಾ ಪಂಜಾಬ್ ನ್ಯಾಷನಲ್ ಬ್ಯಾಂಕ್ ಜೊತೆ 1993ರ ಸೆಪ್ಟೆಂಬರ್‌ನಲ್ಲಿ ವಿಲೀನಗೊಳ್ಳಬೇಕಾಯಿತು.

### ದಾರಿ ಎತ್ತ?

ಹೀಗೆ ಆದರೆ ಬ್ಯಾಂಕುಗಳ ಮುಂದಿನ ದಾರಿ ? ನಷ್ಟ ಬ್ಯಾಂಕುಗಳೆಲ್ಲ ಮುಚ್ಚಿಹೋಗಿ ಸಶಕ್ತ ಬ್ಯಾಂಕುಗಳ ಜೊತೆ ವಿಲೀನ ಕ್ರಿಯೆಗೆ ಇದೇ ಹಾದಿಯಾದೀತು. ಆದರೂ ಬ್ಯಾಂಕುಗಳು ತಮ್ಮ ಬಂಡವಾಳ ನೆಲೆಯನ್ನು ವಿಸ್ತರಿಸಿಕೊಳ್ಳುವತ್ತ ದೃಷ್ಟಿ ಹರಿಸಿ, ಹೆಚ್ಚುವರಿ ಸಂಪನ್ಮೂಲ ಸಂಗ್ರಹಕ್ಕೆ ಬಂಡವಾಳ ಪೇಟೆಗೂ ಪ್ರವೇಶ ಮಾಡುತ್ತಿರುವುದು ಈಚಿನ ಒಂದು ತಾಜಾ ಬೆಳವಣಿಗೆ.

ಈ ಎಲ್ಲ ಬದಲಾವಣೆಯ ಗಾಳಿ ಸ್ವಾಗತಾರ್ಹವೇ ಆದರೂ, ಬ್ಯಾಂಕುಗಳು ಸಾಗಬೇಕಾದ ದಾರಿ ಸುಗಮವಾಗಿಯೇನೂ ಇಲ್ಲ. ತಾವು ಕೊಟ್ಟ ಸಾಲವನ್ನು ವಸೂಲು ಮಾಡಬೇಕಾದ್ದು ಬ್ಯಾಂಕುಗಳ ಕರ್ತವ್ಯ ನಿಜ. ಅದನ್ನು ಅವು ಅಚ್ಚುಕಟ್ಟಾಗಿ ನಿರ್ವಹಿಸಬೇಕಾದ್ದೇ. ಆದರೆ ನಮ್ಮ ದೇಶದಲ್ಲಿ ಬ್ಯಾಂಕುಗಳು ನೀಡುವ ಸಾಲಕ್ಕೆ ಒಳ್ಳೆಯ 'ಇಮೇಜು' ಎಂಬುದೇ ಇಲ್ಲವಲ್ಲ!

'ಬ್ಯಾಂಕಿನ ಸಾಲ ಎಂಬುದು ವಾಪಸ್ಸು ಕಟ್ಟುವುದಕ್ಕಲ್ಲ ; ಅದು ಇಂದಲ್ಲ ನಾಳೆ ಮನ್ನಾ ಆಗುವಂಥಾದ್ದು' ಎಂಬಂಥ ಲಘುಭಾವನೆ ಜನಸಾಮಾನ್ಯರಲ್ಲಿ ಬೇರೂರಿದ್ದು ಸುಳ್ಳಲ್ಲ. ರಾಜಕೀಯ ಸ್ಥಿತ್ಯಂತರಗಳು ಉಂಟು ಮಾಡುವ ಗೊಂದಲಗಳು ಮತ್ತು ಅವು ಜನರಲ್ಲಿ ರೂಪಿಸುವ ತಪ್ಪುಕಲ್ಪನೆಗಳು ಬ್ಯಾಂಕಿಂಗ್ ಕ್ಷೇತ್ರವನ್ನು ತುಂಬಾ ಸಂಕಟಕ್ಕೆ ಈಡುಮಾಡಿವೆ. ಸ್ವಲ್ಪ ಕಾಲ 'ಸಾಲಮೇಳ'ಗಳ ಆರ್ಭಟ ನಡೆದುಹೋಯಿತು. ಎರಡನೆ ಹಂತದಲ್ಲಿ 'ಸಾಲಮನ್ನಾ'ದ ಭರ್ಜರಿ ಭರಾಟೆ! ಈ ಎರಡೂ ವಿಪರ್ಯಾಸಗಳ ಅನಂತರ ಈಗ ಮತ್ತೊಂದು ಬಗೆಯ ಸಂಕಟ ಧರ್ಮ! ಅದೇ ವಸೂಲಿಯಜ್ಞ!

ಬ್ಯಾಂಕುಗಳು ಈ ತನಕ ಬರೀ ಕೊಟ್ಟು ಕೋಡಂಗಿಯಾಗಿದ್ದರೆ, ಅತ್ತ ಇಸಕೊಂಡವನೇ ಈರಭದ್ರನಾಗಿ ಮೆರೆದದ್ದು! ಈಗ ಒಮ್ಮೆಲೇ 'ಪಾಟರ್ನ್' ಬದಲಿ ಮಾಡುವುದೆಂದರೆ ಸ್ವಲ್ಪ ಕಷ್ಟವೇ. ಏನೇ ಆಗಲಿ, ಈ ವಸೂಲಿ ಯಜ್ಞಕ್ಕೆ ಬ್ಯಾಂಕುಗಳೇ ಬಲಿಯಾಗಬೇಕಾದ್ದಿಲ್ಲ. ಮೇಳ–ಮನ್ನಾಗಳಿಗೆ ಒಗ್ಗಿಹೋಗಿರುವ ಜನಗಳನ್ನು ಸುಶಿಕ್ಷಿತರನ್ನಾಗಿ ಮಾಡುವುದೂ ಒಂದು ರೀತಿಯ ಯಜ್ಞವೇ. ಸರ್ಕಾರ ಮತ್ತು ಬ್ಯಾಂಕುಗಳು ಈಗ ಒಟ್ಟಿಗೆ ಈ ಕಾರ್ಯವನ್ನು ಮಾಡಬೇಕಾಗಿದೆ. ★

---

## 'ನರಸಿಂಹಂ ಸಮಿತಿ'ಯ ಶಿಫಾರಸುಗಳು ಮತ್ತು ಬ್ಯಾಂಕಿಂಗ್ ವ್ಯವಸ್ಥೆಯ ಪುನರ್ರಚನೆ

[13ನೇ ಪುಟದಿಂದ ಮುಂದುವರಿದುದು]

ಖಾಸಗಿ, ಸಾರ್ವಜನಿಕ ಮತ್ತು ವಿದೇಶಿ ಬ್ಯಾಂಕುಗಳಿಗೆ ಸಮತಟ್ಟಾದ ಸ್ಪರ್ಧಾಕಣವನ್ನು ಒದಗಿಸದಿದ್ದಲ್ಲಿ, ಈ ಬ್ಯಾಂಕುಗಳು ತಮ್ಮ ಮುಖ್ಯ ಕಸುಬಾದ ಉದರಿ ನೀಡಿಕೆಯನ್ನು ಕೈಬಿಟ್ಟು ವಿನಿಯೋಜನೆ ಕಂಪನಿಗಳಾಗಿ ಪರಿವರ್ತನೆಗೊಳ್ಳುತ್ತವೆ. ಷೇರು ಮಾರುಕಟ್ಟೆ, ಪರಸ್ಪರ ನಿಧಿಗಳು, ಅಂಚೆ ಉಳಿತಾಯ ಯೋಜನೆಗಳು ಮುಂತಾದವುಗಳಿಂದ ಈಗಾಗಲೇ ಸ್ಪರ್ಧೆ ಎದುರಿಸುತ್ತಿರುವ ಬ್ಯಾಂಕುಗಳಿಗೆ ತೀರಾ ಅಗತ್ಯವಾಗಿರುವ ಕಾರ್ಯನಿರ್ವಹಣಾ ಸ್ವಾತಂತ್ರ್ಯವನ್ನು ಸರ್ಕಾರ ಕೊಡದೆ ಇದ್ದರೆ, ರಾಜಕೀಯ ಹಸ್ತಕ್ಷೇಪಕ್ಕೆ ಇತಿಶ್ರೀ ಹಾಡದಿದ್ದರೆ ನರಸಿಂಹಂ ಸಮಿತಿಯ ಶಿಫಾರಸುಗಳನ್ನು ಜಾರಿಗೆ ತಂದೂ ಏನೂ ಪ್ರಯೋಜನವಿಲ್ಲ. ಅಂತೂ, ಬ್ಯಾಂಕಿಂಗ್ ಉದ್ಯಮದ ಅಭಿವೃದ್ಧಿಯಲ್ಲಿ ಆಸಕ್ತರಾಗಿರುವವರಿಗೆ ಬರಲಿರುವ ದಿನಗಳೆಲ್ಲ ಕುತೂಹಲಕರ ದಿನಗಳಾಗಲಿವೆ ಎಂಬುದರಲ್ಲಿ ಸಂಶಯವಿಲ್ಲ. ★

---

# ಸಾಲ ವಸೂಲಾತಿ ಮತ್ತು ಬ್ಯಾಂಕ್ ವಕೀಲರ ಪಾತ್ರ

**ಎಂ. ಬಲರಾಂ**

ಭಾರತೀಯ ಸ್ಟೇಟ್ ಬ್ಯಾಂಕ್, ದೂರವಾಣಿ ನಗರ ಶಾಖೆ, ಬೆಂಗಳೂರು

ರೋಗ ಬಂದ ಮೇಲೆ ಚಿಕಿತ್ಸೆ ಮಾಡಿಸುವ ಉಪಾಯ ಕುರಿತು ಯೋಚಿಸುವ ಬದಲು ರೋಗವೇ ಬಾರದಂತೆ ಮುನ್ನೆಚ್ಚರಿಕೆ ವಹಿಸುವುದು ಮೇಲು. ಕೊಟ್ಟ ಸಾಲ ವಸೂಲಾಗದಾಗ ವಕೀಲರ ನೆರವು ಪಡೆದು ಕ್ರಮ ಜರುಗಿಸುವ ಬದಲು ವ್ಯವಹಾರದ ಆರಂಭದಿಂದಲೇ ಬ್ಯಾಂಕು ವಕೀಲರ ಸಲಹೆಯಂತೆ ಕಾರ್ಯಪ್ರವೃತ್ತವಾಗುವುದು ವಿವೇಕದ ಲಕ್ಷಣ.

ಬ್ಯಾಂಕಿಂಗ್ ವಲಯದ ಮುಖ್ಯ ಕಾರ್ಯಕ್ಷೇತ್ರವೆಂದರೆ ಸಾರ್ವಜನಿಕರಿಂದ ನಿಧಿ ಸಂಗ್ರಹಣೆ ಮತ್ತು ಹಾಗೆ ಸಂಗ್ರಹಿಸಿದ ಸಂಪನ್ಮೂಲಗಳನ್ನು ಅರ್ಹ ಜನರಿಗೆ ಸಾಲ ರೂಪದಲ್ಲಿ ಹಂಚಿಕೆ. ಠೇವಣಿ ಸಂಗ್ರಹಣೆ ಎಷ್ಟು ಅತ್ಯವಶ್ಯ ಕಾರ್ಯವೋ ಕೊಟ್ಟ ಸಾಲದ ವಸೂಲಾತಿಯೂ ಅಷ್ಟೇ ಪ್ರಮುಖವಾದ ಕಾರ್ಯ. ಬ್ಯಾಂಕಿನ ಕಾರ್ಯಕ್ಷೇತ್ರ ಶತಾಂಶ ಹಣಕಾಸಿಗೆ ಸಂಬಂಧಿಸಿದ್ದೇ ಆದ್ದರಿಂದ ಕೊಟ್ಟ ಸಾಲದ ಹಣ ನಿಂತ ನೀರಾಗಬಾರದು. ಅದು ಹರಿಯುವ ಹೊಳೆಯಾಗಬೇಕು. ಕೊಟ್ಟ ಸಾಲದ ಹಣ ತನ್ನ ಹೂಡಿಕೆಯಿಂದ ಲಾಭ ತಳೆದು ಬ್ಯಾಂಕಿಗೆ ಮರಳಿ ಬಂದಾಗ ಅದು ಇನ್ನೊಬ್ಬ ಅಪೇಕ್ಷಿಯ ಪಾಲಿಗೆ ಕಾಮಧೇನುವಾಗುತ್ತದೆ. ಬ್ಯಾಂಕುಗಳ ಗುರಿ ಅರ್ಥಪೂರ್ಣವಾಗುತ್ತದೆ. ಹೀಗೆ ವಿನಿಯೋಜನೆಯ ಚಕ್ರ ತಿರುಗಲು ನಿರಂತರ ಕಾರ್ಯದಕ್ಷತೆಯ ಚಟುವಟಿಕೆಯಿರಬೇಕು. ಇಲ್ಲದಿದ್ದಲ್ಲಿ ನೀಡಿದ ಸಾಲಗಳು ಸಕಾಲದಲ್ಲಿ ಮರುಪಾವತಿಯಾಗದಿದ್ದರೆ, ವಿನಿಯೋಜನೆಯ ಚಕ್ರ ಸ್ಥಗಿತಗೊಳ್ಳುತ್ತದೆ. ಆದ್ದರಿಂದ ಸಾಲದ ಸ್ವಸ್ಥ ವಸೂಲಾತಿಗಾಗಿ ಬ್ಯಾಂಕರುಗಳಲ್ಲಿ ಸಾಲ ನೀಡುವಿಕೆಯ ಕ್ರಮದ ಸ್ಪಷ್ಟ ಚಿತ್ರಣವಿರಬೇಕು. ಫಲಾನುಭವಿಯ ಸಂಪೂರ್ಣ ಮಾಹಿತಿ, ಆತ ಕೈಗೊಳ್ಳಬಹುದಾದ ವ್ಯಾಪಾರ ಅಥವಾ ಉದ್ದಿಮೆ, ಅದರಿಂದ ಮುಂದಾಗುವ ಸಾಧಕ–ಬಾಧಕಗಳ ವಿಶ್ಲೇಷಣೆ ಮಾಡುವ ಸಾಮರ್ಥ್ಯ ಬ್ಯಾಂಕರುಗಳಿಗಿದ್ದರೆ ಸಾಲ ವಸೂಲಾತಿಯ ಬಗ್ಗೆ ಅಷ್ಟೇನೂ ಸಮಸ್ಯೆಯಿರದು. ಜೊತೆಗೆ ಗ್ರಾಹಕನ ಸಾಲ ಪಡೆಯುವಿಕೆಯ ಗಾತ್ರ ಮತ್ತು ಮರುಪಾವತಿ ಮಾಡುವ ಸಾಮರ್ಥ್ಯವನ್ನೂ ಗ್ರಹಿಸಿದರೆ ಉತ್ತಮ. ಸಾಲಗಾರನೊಂದಿಗೆ ನಿರಂತರ ಸಂಪರ್ಕ, ಮಧುರ ಬಾಂಧವ್ಯ, ಮರುಪಾವತಿಯ ಬಗ್ಗೆ ಸದಾ ಎಚ್ಚರದ ಸ್ಥಿತಿ ಬ್ಯಾಂಕರುಗಳ ಈ ಸಮಸ್ಯೆಗೆ ಪರಿಹಾರ ಮಾರ್ಗ ತೋರಿಸಬಹುದು.

## ಆರಂಭದಿಂದ ಆರೋಗ್ಯ

ಮೇಲೆ ಹೇಳಿದಂತೆ ಬ್ಯಾಂಕಿನ ಕ್ಷೇತ್ರಾಧಿಕಾರಿಯೋ ಶಾಖಾ ವ್ಯವಸ್ಥಾಪಕರೋ ಸಾಲ ವಸೂಲಾತಿಯ ಬಗ್ಗೆ ನಿರ್ದಿಷ್ಟವಾದ ನಿಲುವು ಹೊಂದಿ ಎಲ್ಲಾ ಮುನ್ನೆಚ್ಚರಿಕೆ ವಹಿಸಿ ಸಾಲ ನೀಡಿದಲ್ಲಿ ಮರುಪಾವತಿಯ ಬಗ್ಗೆ ಸಂಪೂರ್ಣ ನಿಶ್ಚಿಂತೆಯೆಂದೇನೂ ಅಲ್ಲ. ಎಲ್ಲ ಅಂಕಿ–ಅಂಶಗಳ ಆಧಾರದ ಮೇಲೆ ಭರವಸೆಯಿಂದ ನೀಡಿದ ಸಾಲಗಳೆಷ್ಟೋ ಮರುಪಾವತಿಯಾದುದಿಲ್ಲ. ಸಾಲ ವಸೂಲಾತಿಯ ಕ್ರಮದಲ್ಲಿ ಮಾಡಬಹುದಾದ ಎಲ್ಲ ಹಂತಗಳೂ ಮುಗಿದಾಗ ಮೇಲೆ ನುರಿತ ವಕೀಲರ ಮೂಲಕ ಕಾನೂನಿನ ರೀತ್ಯ ಸಾಲಗಾರರ ಮೇಲೆ ಕ್ರಮ ಜರುಗಿಸುವುದು ಅನಿವಾರ್ಯವಾಗುತ್ತದೆ. ಆದರೆ ಅದಕ್ಕೆ ಅಗತ್ಯವಾದ ದಾಖಲೆ ಪತ್ರಗಳನ್ನು ಬ್ಯಾಂಕು ಒದಗಿಸಬೇಕು. ಕಾನೂನಿನ ಪ್ರಶ್ನೆ ಸ್ವಲ್ಪ ತೊಡಕಿನದಾದುದರಿಂದ ಅದರ ಜರುಗುವಿಕೆಯ ಕ್ರಮವೂ ಸ್ವಲ್ಪ ತೊಡಕಿನದೇ. ಪಕ್ಕಾ ಎನ್ನಬಹುದಾದ ಎಲ್ಲಾ ವಿಧದಲ್ಲಿಯೂ ಸಾಲಗಾರನ ಮೇಲೆ ಕ್ರಮ ಜರುಗಿಸಬಹುದಾದ ರೀತಿಯಲ್ಲಿ ಸಮರ್ಪಕವಾದ ದಾಖಲೆ ಪತ್ರಗಳು ದೊರಕುವುದು ಕಷ್ಟ. ಏಕೆಂದರ ಸಾಲ ಮಂಜೂರು ಮಾಡುವಾಗಿನ ವಿಳಂಬ, ಕಾರ್ಯದೊತ್ತಡ, ಸರಿಯಾದ ಕ್ರಮವರಿಯದೇ ಸಿದ್ಧಪಡಿಸಿದ ಸಾಲಪತ್ರಗಳು ಸಾಲಗಾರನ ಮೇಲೆ ಕ್ರಮ ಜರುಗಿಸಲು ವಕೀಲರ ಕೈಕಟ್ಟಿಹಾಕಬಹುದು ಕ್ಷೇತ್ರಾಧಿಕಾರಿಯ ಅನ್ಯಮನಸ್ಕತೆಯಿಂದಲೋ, ಉದಾಸೀನತೆಯಿಂದಲೋ, ಅಲ್ಪಜ್ಞಾನದಿಂದಲೋ ಸಮಯದ ಅಭಾವದಿಂದಲೋ ಪಡೆದುಕೊಂಡ ಅಸಮರ್ಪಕ ಇಲ್ಲವೇ ಅಸಂಪೂರ್ಣ ದಾಖಲೆ ಪತ್ರಗಳು ಕಾನೂನಿನ ದೃಷ್ಟಿ ದೃಷ್ಟಿಯಿಂದ ನ್ಯಾಯಾಲಯದ ಕಟ್ಟೆ ಏರಿದಾಗ ನ್ಯಾಯಾಧೀಶರಲ್ಲಿ ಕಸಕ್ಕಿಂತಲೂ ಕಡೆಯಾಗಿ ಹೋಗುವ ಸಂಭವವುಂಟು. ಎಷ್ಟೋ ವೇಳೆ ನ್ಯಾಯಾಧೀಶರು ಇಂತಹ ಕಟ್ಟಳೆಗಳಲ್ಲಿ ಬ್ಯಾಂಕಿನ

ಸಂಬಂಧಿಸಿದ ಅಧಿಕಾರಿಗಳನ್ನು ಈ ಬಗ್ಗೆ ತರಾಟೆಗೆ ತೆಗೆದುಕೊಂಡು ದಿದೆ.

### ವಕೀಲರ ನೆರವು

ಆದ್ದರಿಂದ ಸಾಲ ಮಂಜೂರಾಗುವ ಘಟ್ಟದಿಂದಲೇ ಎಲ್ಲಾ ದಾಖಲೆಗಳನ್ನು ವಕೀಲರ ಅವಗಾಹನೆಯಿಂದ ಪಡೆದುಕೊಳ್ಳುವುದು ಉತ್ತಮ. ಆದರೆ ಈ ಪದ್ಧತಿಯನ್ನು ಎಷ್ಟರ ಮಟ್ಟಿಗೆ ಅನುಷ್ಠಾನಕ್ಕೆ ತರಬಹುದು ಎನ್ನುವ ಬಗ್ಗೆ ಅನುಮಾನವೂ ಇದೆ. ಏಕೆಂದರೆ ಬ್ಯಾಂಕು ಸಾಲಗಳಲ್ಲಿ ಶೇ. 40ರಷ್ಟು ಭಾಗ ಆದ್ಯತಾ ಕ್ಷೇತ್ರಗಳೆನಿಸಿದ ಕೃಷಿ, ಸಣ್ಣ ಗುಡಿಕೈಗಾರಿಕೆಗಳಿಗೆ ಮೀಸಲು. ಉಳಿದದ್ದು ದೊಡ್ಡ ಕೈಗಾರಿಕೆಗಳಿಗೆ. ಮಳೆಯನ್ನು ನಂಬಿದ ಕೃಷಿ ಕ್ಷೇತ್ರವನ್ನು ಕಾನೂನಿನ ಬಿಗಿ ಮುಷ್ಟಿಗೆ ಸಿಲುಕಿಸಲು ಹೋದರೆ ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಪ್ರಯೋಗಿಸಿದಂತೆಯೇ ಸರಿ. ವಿದ್ಯುತ್ತಿನ ಕೊರತೆ, ಯಂತ್ರೋಪಕರಣಗಳ ಆಮದಿನ ಮತ್ತು ಕಾರ್ಯನಿಕರತೆಯ ಸಮಸ್ಯೆ, ಆಧುನಿಕ ತಂತ್ರಜ್ಞಾನದ ಅಭಾವ, ಕಚ್ಚಾಸಾಮಗ್ರಿಯ ಅಲಭ್ಯತೆ, ಸಾಗಾಣಿಕೆ ಅಥವಾ ಕಾರ್ಮಿಕ ಸಂಘಗಳ ಸಮಸ್ಯೆಯಿಂದ ಉತ್ಪಾದನೆ ಕುಂಠಿತವಾದಲ್ಲಿ ಸಾಲ ವಸೂಲಾತಿ ಹೇಗೆ ಫಲಪ್ರದವಾಗಲು ಸಾಧ್ಯ? ಆದರೂ, ಯೋಜನೆಗಳು ಕಾರ್ಯಗತವಾಗಿ ಸಾಲ ಪಾವತಿಸುವ ಸಾಮರ್ಥ್ಯವಿದ್ದೂ ಪಾವತಿಸದಿದ್ದಲ್ಲಿ ಮಾಡುವುದೇನು ? ಕಾನೂನಿನ ಹೊರತು ಬೇರಾವ ಪರಿಹಾರ ಮಾರ್ಗವಿದೆ ?

ಸಾಲ ವಸೂಲಾತಿಯ ಬಗ್ಗೆ ಬ್ಯಾಂಕಿಂಗ್ ಕ್ಷೇತ್ರ ಯಾವಾಗಲೂ ವಕೀಲರ ಸಲಹೆ ಪಡೆಯುವುದು ಸಾಧ್ಯವಾಗದಾದರೂ ಕೆಲವು ಮಹತ್ವದ ಸಾಲ ನೀಡಿಕೆಯಲ್ಲಿ ಪಡೆಯುವುದು ಸಮಂಜಸ. ಫಲಾನುಭವಿಯಿಂದ ಪಡೆದ ಕಾಗದಪತ್ರಗಳು ಕ್ರಮಬದ್ಧವಾಗಿವೆಯೇ ಇಲ್ಲವೇ ಎಂಬುದನ್ನು ವಕೀಲರು ಮೊದಲೇ ಪರೀಕ್ಷೆಗೆ ಒಳಪಡಿಸಬಹುದು. ಜಾಮೀನುದಾರರ ಅರ್ಹತೆಯೂ ಆಗಲೇ ನಿರ್ಧಾರಿತವಾಗಬಹುದು. ಯಾವುದೇ ರೀತಿಯ ಕಾನೂನಿನ ತೊಡಕಿರುವ ದಾಖಲೆಗಳ ತಿರಸ್ಕಾರದಿಂದ ಮುಂದೆ ಒದಗಬಹುದಾದ ಸಮಸ್ಯೆ ಈಗಲೇ ಮಾಯವಾಗಬಹುದು. ಇದಕ್ಕೆ ವಕೀಲರ ಪರಿಶ್ರಮವೂ ಅಗತ್ಯ. ಉತ್ತಮ ಕಾನೂನಿನ ರೀತಿ ರಿವಾಜುಗಳನ್ನು ಅದರಲ್ಲೂ ಬ್ಯಾಂಕಿಂಗ್ ವಲಯದ ಕ್ರಮಗಳನ್ನು ಅರಿತ ವಕೀಲರಾದರೆ ಉತ್ತಮ. ಇದಕ್ಕಾಗಿ ಆಯಾ ಬ್ಯಾಂಕಿನ ಪಟ್ಟಿಯಲ್ಲಿ ನಮೂದಾಗಿರುವ ವಕೀಲರುಗಳ ಸೇವೆಯನ್ನು ಪಡೆಯಬಹುದು. ಪ್ರತಿ ವಕೀಲರೂ ಇಂತಿಷ್ಟು ಶಾಖೆಗಳ ಮೇಲ್ವಿಚಾರಣೆ ನಡೆಸಬೇಕೆಂದು ನೇಮಕ ಮಾಡಿ ಆ ಶಾಖೆಗಳ ಜವಾಬ್ದಾರಿಯನ್ನು ಅವರಿಗೆ ವಹಿಸಬಹುದು. ಇದರಿಂದ ಮುಂದೆ ತೊಡಕಾಗಬಹುದಾದಂತಹ ಅಸ್ವಸ್ಥ ದಾಖಲೆ ಪತ್ರಗಳನ್ನು ಮೊದಲೇ ಸರಿಮಾಡಬಹುದು. ಇದಕ್ಕಾಗಿ ಪ್ರತಿ ಬ್ಯಾಂಕು ಕಾನೂನಿನ ಇಲಾಖೆಯ ಸಿಬ್ಬಂದಿಗಳನ್ನು ಬಳಸಿಕೊಳ್ಳಲು ಬರುವುದಿಲ್ಲ. ಪ್ರಚಲಿತ ವಿದ್ಯಮಾನಗಳ ಕೂಲಂಕಷ ಪರಿಚಯವಿರುವ ವ್ಯಕ್ತಿನಿರತ ವಕೀಲರೇ ಉತ್ತಮವೆಂದು ಹಲವು ನಿದರ್ಶನಗಳಿಂದ ರುಜುವಾತಾಗಿದೆ. ಪ್ರಧಾನ ಕಚೇರಿಯಲ್ಲೋ ವಲಯ ಕಚೇರಿಯಲ್ಲೋ ಇರಬಹುದಾದ ಸಿಬ್ಬಂದಿ ದೂರದ ಹಳ್ಳಿಯೊಂದರ ಶಾಖೆಯ ಪ್ರತಿ ಸಾಲ ಮಂಜೂರಾತಿಯ ಬಗ್ಗೆ ಕಾನೂನು ಸಲಹೆ ನೀಡುವುದು ಒಂದು ವಿಳಂಬದ ಹಾಗೂ ಪ್ರಯಾಸದ ಸಂಗತಿ. ಆದ್ದರಿಂದ ಈ ಕಾರ್ಯಕ್ಕಾಗಿ ಸ್ಥಳೀಯ ನುರಿತ ವಕೀಲರನ್ನು ಗೊತ್ತುಮಾಡಿಕೊಳ್ಳುವುದು ಒಳ್ಳೆಯದು.

ಈ ಮೇಲಿನ ವಿಧಾನದಿಂದ ಸಾಲ ನೀಡಿಕೆಯ ಪೂರ್ವ ಕಾಗದ ಪತ್ರ ಪರಿಶೀಲನೆಯಿಂದಾಗಿ ಕರ್ತವ್ಯ ಪ್ರಜ್ಞೆ ಹೆಚ್ಚುತ್ತಿರುತ್ತದೆ. ಇದರಿಂದ ಸಂಭಾವ್ಯ ತಪ್ಪುಗಳು ಕಡಿಮೆಯಾಗುತ್ತದೆ. ಮುಂದೆ ಆಗಬಹುದಾದ ಸಮಸ್ಯೆಯ ಹೊರೆ ವಕೀಲರ ಹೆಗಲ ಮೇಲೆಯೂ ಬೀಳಬಹುದಾದ ಪ್ರಯುಕ್ತ ಅವರು ಈ ವಿಷಯದಲ್ಲಿ ಎಚ್ಚರಿಕೆಯಿಂದಿರುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ.

### ಅಂತಿಮ ಅಸ್ತ್ರ

ಸಾಲ ವಸೂಲಾತಿಗಾಗಿ ಬ್ಯಾಂಕು ವಕೀಲರ ಕಡೆಯಿಂದ ತಿಳಿವಳಿಕೆ ಪತ್ರ ಜಾರಿ ಮಾಡಬಹುದು. ಮೂರು ತಿಳಿವಳಿಕೆ ಪತ್ರ ನೀಡಿದ ಅನಂತರ ಫಲಾನುಭವಿ ಸಾಲ ಮರುಪಾವತಿ ಮಾಡದಿದ್ದಲ್ಲಿ ಬ್ಯಾಂಕು ಆತನ ಮೇಲೆ ವಕೀಲರ ಮುಖಾಂತರ ದಾವೆ ಹೂಡಬಹುದು. ಈ ವಿಷಯದಲ್ಲಿ ಒಂದು ತೊಡಕಿದೆ. ಸರ್ಕಾರಿ ಯೋಜನೆಯಡಿ ಆರ್ಥಿಕವಾಗಿ ಹಿಂದುಳಿದ ಜನಕ್ಕೆ ನೀಡಲಾರದ ಎಷ್ಟೊ ಸಾಲಗಾರರ ವಿಳಾಸಗಳು. ನಿಜವಾದ ವಿಳಾಸಗಳೇ ಅಲ್ಲ. ವಕೀಲರತ್ತ ತಿಳಿವಳಿಕೆ ಪತ್ರ ಇಂತಹವರನ್ನು ತಲಪುವುದೇ ಇಲ್ಲ ?

ಕೆಲವೊಂದು ಸಂದರ್ಭಗಳಲ್ಲಿ ಬ್ಯಾಂಕ್ ವಕೀಲರು ರಾಜಿಯಂತಹ ಸೂತ್ರವನ್ನು ಪಾಲಿಸುವುದು ಒಳ್ಳೆಯ ಪ್ರಯತ್ನ. ದಾವ ಹೂಡುವುದರಿಂದ ಆಗುವ ಸಮಯ ಹಾನಿ, ಆರ್ಥಿಕ ಪೋಲು, ವೃಥಾ ಮಾನಸಿಕ ಕ್ಲೇಶ ಇವುಗಳನ್ನು ಸಾಲಗಾರರಿಗೆ ಮನದಟ್ಟಾಗುವಂತೆ ವಿವರಿಸಿ ಆ ಮೂಲಕ ಸಾಲ ಮರುಪಾವತಿಗೆ ಅವರ ಮನ ಒಲಿಸಬಹುದು. ಪ್ರತಿ ಮೂರು ತಿಂಗಳಿಗೋ ಆರು ತಿಂಗಳಿಗೋ ಗ್ರಾಹಕರ ವೇದಿಕೆಯ ರೀತಿಯಲ್ಲೇ ಅಸ್ವಸ್ಥ ಸಾಲಗಾರರ ಶಿಬಿರಗಳನ್ನು ಏರ್ಪಡಿಸಿ ಬ್ಯಾಂಕ್ ವಕೀಲರು ಅವರಿಗೆ ಮಾರ್ಗದರ್ಶನ ಮಾಡಬಹುದು. ಇದರಿಂದಾಗಿ ಬ್ಯಾಂಕುಗಳ ಹಲವಾರು ಯೋಜನೆಗಳ ಪ್ರಭಾವಗಳನ್ನೂ ಕೈಗೊಳ್ಳಬಹುದು. ಸಾಲದ ದುರುಪಯೋಗದ ಸಂದರ್ಭಗಳಲ್ಲಿ ಸಾಲಿಗ ಬ್ಯಾಂಕು ಕ್ರಿಮಿನಲ್ ದಾವೆಯನ್ನೂ ಹೂಡಬಹುದು. ಉದಾಹರಣೆಗೆ ಇತ್ತೀಚಿನ ಪಂಜಾಬು ಮತ್ತು ಹರಿಯಾಣದ ಉಚ್ಚನ್ಯಾಯಾಲಯದ ಶ್ರೀ ಕೈಲಾಸ್-ಕುಮಾರ್ ತೀರ್ಪಿನಲ್ಲಿ ಈ ಅಂಶವನ್ನು ಪ್ರಸ್ತಾಪಿಸಲಾಗಿದೆ. ಬ್ಯಾಂಕಿಗೆ ಅಡವಿಟ್ಟ ಸಾಮಗ್ರಿಗಳನ್ನು ದುರುಪಯೋಗಪಡಿಸಿದ ಹಿನ್ನೆಲೆಯಲ್ಲಿ ನ್ಯಾಯಾಧೀಶರು ಭಾರತೀಯ ದಂಡ ಸಹಿತೆ 408ರ ಕಲಮಿನ ಪ್ರಕಾರ ಆರೋಪಿಯ ಕಾರ್ಯ ದಂಡಾರ್ಹವೆಂದು ಮಹತ್ವದ ತೀರ್ಪು ನೀಡಿದ್ದಾರೆ. ಆದರೆ ಈ ಕ್ರಮ ಎಲ್ಲ ಮೊಕದಮ್ಮೆಗಳಿಗೂ ಅನ್ವಯಿಸುವುದಿಲ್ಲ.

[23ನೇ ಪುಟ ನೋಡಿ]

# ಬ್ಯಾಂಕಿಂಗ್ ಉದ್ಯಮದಲ್ಲಿ 'ಅಶಿಸ್ತು'

**ಜಿ. ಆರ್. ನಾಗರಾಜ**

ವ್ಯವಸ್ಥಾಪಕರು (ವಿಚಾರಣೆ), ಶಿಸ್ತುಕ್ರಮ ನಡಾವಳಿ ಇಲಾಖೆ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕೇಂದ್ರ ಕಛೇರಿ, ಬೆಂಗಳೂರು

ಯಾವುದೇ ಸಂಸ್ಥೆಯಲ್ಲಿ ಶಿಸ್ತುಪಾಲನೆ ಅತ್ಯವಶ್ಯ. ಆದರೆ ಶಿಸ್ತುಗೇಡಿತನ ಮಾನವನ ಮೂಲ ಪ್ರವೃತ್ತಿ. ಇದನ್ನು ಅದುಮಿಟ್ಟು, ಶಿಸ್ತನ್ನು ಸಾಧಿಸುವುದು ಸುಲಭದ ಕೆಲಸವಲ್ಲ. ನೇತ್ಯಾತ್ಮಕ ದೃಷ್ಟಿ ಅಪಾಯಕಾರಿ. ಸಂಸ್ಥೆಯ ಸಾವಯವ ಸ್ವರೂಪಕ್ಕೆ ಧಕ್ಕೆ ಉಂಟಾಗದ ಹಾಗೆ, ಅದು ಆರೋಗ್ಯಕರವಾಗಿ ಬೆಳೆಯಲು ಅನುವಾಗುವಂತೆ ಶಿಸ್ತುಸಾಧನೆ ಆಗಬೇಕು. ಈಗಿರುವ ವ್ಯವಸ್ಥೆ ಮತ್ತು ಅದರ ಅನುಸರಣೆ ಎಷ್ಟು ಸಮರ್ಪಕ ?

ಬ್ಯಾಂಕಿಂಗ್ ಒಂದು ಉದ್ಯಮ. ಸೇವಾ ಸಂಸ್ಥೆಯೂ ಹೌದು. ದೇಶದ ಆರ್ಥಿಕ ವಹಿವಾಟಿನ ನಿರ್ವಹಣೆಯ ಮೂಲಕ ದೇಶದ ಪ್ರಗತಿಯಲ್ಲಿ ಬ್ಯಾಂಕಿಂಗ್ ಪ್ರಮುಖ ಪಾತ್ರ ವಹಿಸಿರುವುದು ಸರ್ವ ವಿದಿತ. ಸಾರ್ವಜನಿಕ ಸೇವೆಯಲ್ಲಿ ಬ್ಯಾಂಕಿಂಗ್ ಪಾತ್ರ ಹಿರಿದು. ಅಂತೆಯೆ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಗ್ರಾಹಕರ ಸೇವೆ ಬಹು ಮುಖ್ಯ. ಆದಕ್ಕಾಗಿ ಬ್ಯಾಂಕ್ ಸಿಬ್ಬಂದಿಗೆ ಗ್ರಾಹಕರ ಒಡನಾಟದಲ್ಲಿ ಸೌಜನ್ಯ, ಸಂಯಮ, ವಿನಯ ಮೈಗೂಡಿಸಿಕೊಂಡು ಸಂಸ್ಥೆಯ ಸರ್ವತೋಮುಖ ಬೆಳವಣಿಗೆಗೆ ಸಹಕಾರಿಯಾಗಬೇಕಾದ್ದು ಸಹಜ. ಅಲ್ಲದೆ ಈ ಸೇವಾ ವ್ಯವಸ್ಥೆಯಲ್ಲಿ ಗ್ರಾಹಕರ ಅನುಕೂಲಕ್ಕಾಗಿ ಕ್ರಮಬದ್ಧ ನಿಯಮಗಳನ್ನು ರೂಪಿಸಿಕೊಂಡು ತಮ್ಮ ದೈನಂದಿನ ವ್ಯವಹಾರದಲ್ಲಿ ಅಳವಡಿಸಿಕೊಳ್ಳಬೇಕಾದ್ದು ಅವಶ್ಯಕ. ಇದೇ ಶಿಸ್ತು.

ಬ್ಯಾಂಕಿಂಗ್ ಉದ್ಯಮ ಮಾನವ ಶಕ್ತಿ ಆಧಾರಿತವಾದುದು. ಕಂಪ್ಯೂಟರ್ ಅಳವಡಿಕೆ ಕೆಲವೆಡೆ ಇದ್ದರೂ ಬಹುತೇಕ ನಮ್ಮ ದೇಶದಲ್ಲಿ ಬ್ಯಾಂಕಿಂಗ್ ಒಳ ಹಾಗೂ ಹೊರ ವಹಿವಾಟುಗಳೆಲ್ಲ ಮಾನವ ಶಕ್ತಿ ಆಧಾರಿತ. ಬ್ಯಾಂಕ್ ಸಿಬ್ಬಂದಿಗೆ ಜನಸಂಪರ್ಕ ಸಾಮಾನ್ಯ. "ಗ್ರಾಹಕರ ಸೇವೆಯೇ ನಮ್ಮ ಗುರಿ" ಎನ್ನುವ ಬ್ಯಾಂಕ್ ಸಿಬ್ಬಂದಿಯ ಮೂಲ ಮಂತ್ರ ಸದಾ ಪ್ರಚಲಿತ. ಇಂತಹ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಸಿಬ್ಬಂದಿಯ ನಡವಳಿಕೆಯಲ್ಲಿ ಶಿಸ್ತು ಪ್ರಧಾನ. ಶಿಸ್ತು ಸಂಸ್ಥೆಯ ಮುನ್ನಡೆಗೆ ಕಾರಣ ಸಹ. ಶಿಸ್ತು, ಅದರ ರೂಪುರೇಷೆಗಳ ತಿಳಿವಳಿಕೆಗೆ ಶಿಕ್ಷಣ ಇವು ಆಯಾ ಉದ್ದಿಮೆ, ವ್ಯವಸ್ಥೆಗೆ ಅನುಸಾರವಾಗಿರುತ್ತದೆ. ಬ್ಯಾಂಕಿಂಗ್ ಉದ್ಯಮದಲ್ಲಿ ಅದರ ಸಿಬ್ಬಂದಿ ವರ್ಗಕ್ಕೆ ಈ ಶಿಸ್ತಿನ ಆಚರಣೆ ವ್ಯವಸ್ಥೆಯ ಘನತೆಗೆ ಪೂರಕವಾಗಿರುತ್ತದೆ.

ಶಿಸ್ತಿಗೆ ವಿರುದ್ಧವಾದ ವರ್ತನೆಯೇ ಅಶಿಸ್ತು. ಸಿಬ್ಬಂದಿಯ ಸೇವಾ ನಿಯಮಾವಳಿಗಳ ಅನುಷ್ಠಾನದಲ್ಲಿ ವ್ಯತ್ಯಯ ಉಂಟಾದರೆ ಅದು ಅಶಿಸ್ತಿಗೆ ಕಾರಣವಾಗುತ್ತದೆ. ಶಿಸ್ತಿನ ಪರಿಪಾಲನೆಗೆ ಶಿಕ್ಷಣ ಯಾವ ರೀತಿ ಸಹಾಯಕವೋ ಹಾಗೆಯೇ ಅಶಿಸ್ತಿನ ನಿವಾರಣೆಗೆ ಸಹ ಶಿಕ್ಷಣ ವ್ಯವಸ್ಥೆ ತೀರ ಅಪೇಕ್ಷಣೀಯ. ಅಶಿಸ್ತು ಹೆಚ್ಚಾದಾಗ ಸಂಸ್ಥೆಯ ಬೆಳವಣಿಗೆ ಕುಂಠಿತವಾಗುತ್ತದೆ. ವ್ಯವಸ್ಥಿತ ಶಿಕ್ಷಣ, ತಿಳಿವಳಿಕೆಗಳ ಮೂಲಕ ಅಶಿಸ್ತನ್ನು ಕಡಿಮೆ ಮಾಡಬಹುದು. ಅಧಿಕಾರಿ ಅಥವಾ ಸಿಬ್ಬಂದಿ ವರ್ಗದಲ್ಲಿ ಅಶಿಸ್ತು ಹೆಚ್ಚಾದ ಸಂದರ್ಭದಲ್ಲಿ ಅದಕ್ಕೆ ಕಾರಣಗಳನ್ನು ಕಂಡುಕೊಂಡು ಸಂಬಂಧಪಟ್ಟವರ ಮೇಲೆ ತೆಗೆದುಕೊಳ್ಳಬಹುದಾದ ನಡವಳಿಕೆಯೇ ಶಿಸ್ತುಕ್ರಮ. ಅಂದರೆ ಈ ಶಿಸ್ತುಕ್ರಮದ ಮೂಲ ಉದ್ದೇಶ ಅಶಿಸ್ತು ನಿವಾರಣೆ. ಅಶಿಸ್ತು ಒಂದು ಅರ್ಬುದ ರೋಗವಿದ್ದಂತೆ. ಅದು ಗೋಚರಿಸಿದ ಕೂಡಲೇ ಚಿಕಿತ್ಸೆ ಮಾಡದಿದ್ದರೆ ಅದು ಸಂಸ್ಥೆಯ ಅಭಿವೃದ್ಧಿಗೆ ಮಾರಕವಾಗಬಹುದು. ಸಂಸ್ಥೆಯ ಅಧೋಗತಿಗೆ ಕಾರಣವಾಗಬಹುದು.

ಬ್ಯಾಂಕಿಂಗ್ ಸಿಬ್ಬಂದಿವರ್ಗದವರು ಸುಶಿಕ್ಷಿತರು, ಸಂಯಮಶೀಲರು ಮುಂತಾಗಿ ಪ್ರಶಂಸೆಗೆ ಪಾತ್ರರಾದವರು. ಆದರೂ ಕೆಲವೊಮ್ಮೆ ಗ್ರಾಹಕರ ಸೇವೆಯಲ್ಲಿ ಮತ್ತೆ ಹತ್ತು ಹಲವಾರು ಸಂದರ್ಭಗಳಲ್ಲಿ ಅವ್ಯಕ್ತ ಶಕ್ತಿಯ ಅಥವಾ ಯಾವುದೇ ಬಲವಂತ ಕಾರಣಗಳಿಂದಾಗಿ ನಿಯಮಾವಳಿಗಳ ಪರಿಧಿಯ ಹೊರಗೆ, ಉದ್ಯಮದ ಆರ್ಥಿಕ ನೀತಿ ನಿಯಮಗಳನ್ನು ಮೀರಿ ಕಾರ್ಯನಿರ್ವಹಿಸುವಾಗ ಉದ್ಯಮದ ಹಿತಕ್ಕೆ ಧಕ್ಕೆಯಾದಾಗ ಅಶಿಸ್ತಿಗೆ ಕಾರಣವಾಗಬಹುದಾಗಿದೆ. ಆಗ ಸಿಬ್ಬಂದಿ ಶಿಸ್ತುಕ್ರಮಕ್ಕೆ ಒಳಗಾಗಬೇಕಾಗುತ್ತದೆ.

ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ವ್ಯವಸ್ಥಾಪಕ (ಅಧಿಕಾರ ವರ್ಗ), ನೌಕರ ವರ್ಗ ಎಂಬ ಎರಡು ವರ್ಗಗಳು ಇವೆ. ಈ ಎರಡೂ ವರ್ಗಗಳಿಗೂ ಶಿಸ್ತುಕ್ರಮದಲ್ಲಿ ಭಿನ್ನತೆ ಇದೆ. ಅಧಿಕಾರ ವರ್ಗದಲ್ಲಿ ಕೆಲವು ಸೇವಾನಿಯಮಗಳು ವಿಶೇಷವಾಗಿ ರೂಪಿಸಲ್ಪಟ್ಟಿರುತ್ತವೆ. ಅಧಿಕಾರಿ ವರ್ಗದಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯ ಹಾಗೂ ಅದರ ಸರ್ವತೋಮುಖ ಅಭಿವೃದ್ಧಿಯ ಜವಾಬ್ದಾರಿಗಳು ಹೆಚ್ಚು. ನೌಕರ ವರ್ಗದಲ್ಲಿ ದೈನಂದಿನ ವ್ಯವಹಾರ, ಪ್ರಚಲಿತ ಕಾರ್ಯಗಳ ಮುಖ್ಯ ಹೊಣೆ

ಹೆಚ್ಚು. ಅದಕ್ಕೆ ಅನುಗುಣವಾಗಿ ಶಿಸ್ತುಕ್ರಮಗಳು ಈ ಎರಡು ವರ್ಗಗಳಿಗೆ ಬೇರೆಬೇರೆಯೇ ಇರುತ್ತವೆ.

ಅಧಿಕಾರಿಗಳ ಸೇವಾ ನಿಯಮಗಳು ಅಶಿಸ್ತು ಅಥವಾ ಅಕ್ರಮ ನಡತೆಯ ಪ್ರಮಾಣವನ್ನು ಸ್ಪಷ್ಟಪಡಿಸುತ್ತವೆ. ಈ ವರ್ಗೀಕರಣದ ಮತ್ತು ಅದರ ಮುಂದಿನ ವಿಭಜನೆಗಳು ಯಾವುವು ಎಂಬುದನ್ನು ಕೂಲಂಕಷವಾಗಿ ವಿವರಿಸಿದೆ. ಅಶಿಸ್ತಿನ ನಿವಾರಣೆಯಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯಗಳು :

1 ಅಶಿಸ್ತು ಮೊದಲನೆಯ ಬಾರಿಯೆ ಅಥವಾ ಪುನರಾವರ್ತಿತವೆ ?
2 ಅಶಿಸ್ತಿನ ಆಳ/ತೀಕ್ಷ್ಣತೆ
3 ಅಶಿಸ್ತಿನ ಹಿಂದಿರುವ ಉದ್ದಿಶ್ಯ
4 ಅಶಿಸ್ತು ಸದುದ್ದೇಶ ಪೂರಿತವೊ, ದುರುದ್ದೇಶಪೂರಿತವೊ ?
5 ಅಶಿಸ್ತಿನಿಂದ ಸಂಸ್ಥೆಗೆ ಎಷ್ಟರ ಮಟ್ಟಿಗೆ ಹಾನಿಯಾಗಿದೆ/ಎಷ್ಟರ ಮಟ್ಟಿಗೆ ಹಾನಿಯಾಗಬಹುದು ?
6 ಅಶಿಸ್ತಿನ ನೌಕರ ಸಂಧಾರಣೆಗೆ ಯೋಗ್ಯನೊ, ಅಲ್ಲವೊ ?

ಅಶಿಸ್ತು ಮಾನವ ಮೂಲ ವಿಷಯವಾದ್ದರಿಂದ ಮಾನವೀಯ ಮೌಲ್ಯಗಳನ್ನು ಗಣನೆಗೆ ತಂದುಕೊಳ್ಳಬೇಕು.







ಈ ಮೇಲೆ ತೋರಿಸಿರುವ ನಕ್ಷೆಯ ಪ್ರಕಾರ ಸಂಸ್ಥೆಯ ಒಳಗೆ ನೌಕರರ ಮತ್ತು ಅಧಿಕಾರಿಗಳ ಬಾಂಧವ್ಯ, ಹೊರಗಡೆ ನೌಕರರ, ಅಧಿಕಾರಿಗಳ ಮತ್ತು ಗ್ರಾಹಕರ ಬಾಂಧವ್ಯ ಎಷ್ಟು ಮುಖ್ಯ ಎನ್ನುವುದಕ್ಕೋಸ್ಕರ ಮತ್ತು ಸಂಸ್ಥೆಯ ಹಿತರಕ್ಷಣೆಗಾಗಿ ಕೆಲವು ಕಟ್ಟುಪಾಡು, ನಿಯಮಗಳನ್ನು ಮಾಡಿರುತ್ತಾರೆ. ಈ ನಿಯಮಗಳ ಉಲ್ಲಂಘನೆಯೇ ಅಶಿಸ್ತು. ಬ್ಯಾಂಕಿಂಗ್ ಸಂಸ್ಥೆಯಲ್ಲಿ ನೌಕರನ ಮತ್ತು ಅಧಿಕಾರಿಯ ಶ್ರೇಣಿಗೆ ತಕ್ಕಂತೆ ಪೂರ್ವಯೋಜಿತವಾಗಿ ಶಿಕ್ಷಣ ನಿರ್ವಹಣಾ ಅಧಿಕಾರಿ ಅಥವಾ ಶಿಸ್ತುಸಾಧಕ ಅಧಿಕಾರಿ ಮೊದಲೇ ನೇಮಕಗೊಂಡಿರುತ್ತಾರೆ. ಆತ ಶಿಸ್ತು ನಡಾವಳಿ ಕ್ರಮವನ್ನು ಕೆಳಕಂಡಂತೆ ನಡೆಸುತ್ತಾರೆ :

ಅಶಿಸ್ತಿನ ವಿರುದ್ಧ ಕ್ರಮದ ನಡಾವಳಿ ಈ ರೀತಿ ಇರುತ್ತದೆ :

1 ನೌಕರನಿಗೆ ಅಶಿಸ್ತಿನ ಪಟ್ಟಿಯನ್ನು ನೀಡಿ ಅವನ ಸಮಜಾಯಿಷಿ ಕೇಳುವುದು
2 ನೌಕರನ ಸಮಜಾಯಿಷಿ/ಉತ್ತರ ಸಮರ್ಪಕವಾಗಿಲ್ಲದಿದ್ದಲ್ಲಿ ಅವನಿಗೆ ಆರೋಪ ಪಟ್ಟಿ ನೀಡುವುದು
3 ವಿಚಾರಣಾಧಿಕಾರಿಯ ನೇಮಕ
4 ವಿಚಾರಣೆ
5 ಸಾದರಪಡಿಸುವ ಅಧಿಕಾರಿಯ ನೇಮಕ
6 ಶಿಕ್ಷಾಧಿಕಾರಿಯ ನೇಮಕ

ಯಾವುದೇ ನೌಕರ/ಅಧಿಕಾರಿಯ ಮೇಲೆ ಶಿಸ್ತುನಡಾವಳಿ ಕ್ರಮವನ್ನು ಜರುಗಿಸಬೇಕಾದರೆ ಮೂಲಭೂತವಾದ ತತ್ವಗಳನ್ನು ಪರಿಪಾಲಿಸಬೇಕು. ಅವು ಸಹಜ ನ್ಯಾಯತತ್ತ್ವಗಳು. ಸಹಜ ನ್ಯಾಯ ತತ್ವಗಳ ಮೂರು ಹಂತಗಳು/ಅಂಗಗಳು ಹೀಗಿವೆ :

1 ದೂರು ಆರೋಪಿ ನೌಕರನಿಗೆ ಸಾಧಾರಣವಾಗಿ ಬೇಕಾಗು ವಷ್ಟು ಕಾಲಾವಕಾಶವನ್ನು ಒದಗಿಸುವುದು

2 ಅವನು ಕೇಳುವ ದಸ್ತಾವೇಜುಗಳನ್ನು ಒದಗಿಸುವುದು

3 ಅವನು ಕೇಳುವ ದಸ್ತಾವೇಜುಗಳನ್ನು ನೋಡಲಿಕ್ಕೆ ಮತ್ತು ಪ್ರತಿ ತೆಗೆದುಕೊಳ್ಳಲು ಅವಕಾಶ ಮಾಡಿಕೊಡುವುದು

4 ಅವನು ನೀಡುವ ಸಮರ್ಥನೆಯನ್ನು ಪ್ರತಿವಾದಿಯ (ಆರೋಪಿಯ) ಪ್ರತಿನಿಧಿಯ ಮೂಲಕ ಹಾಜರುಪಡಿಸಲು ಅವಕಾಶ ಮಾಡಿಕೊಡುವುದು

5 ಪ್ರತಿಯೊಂದು ಹಂತದಲ್ಲೂ ಆರೋಪಿ ನೌಕರನಿಗೆ ಸಾಕಷ್ಟು ಅವಕಾಶಗಳನ್ನು ಕಲ್ಪಿಸಿ, ಆರೋಪದ ಬಗ್ಗೆ ಅವನು ಏನು ಹೇಳಬೇಕೆಂದಿರುವನೋ ಅದನ್ನು ಹೇಳಲು ಸಂಪೂರ್ಣವಾಗಿ ಅನುವು ಮಾಡಿಕೊಡುವುದು. ಮತ್ತು ಆರೋಪಿ ತನ್ನ ವಾದ ಸಮರ್ಥನೆಗಾಗಿ ದಸ್ತಾವೇಜುಗಳನ್ನು ಮತ್ತು ಸಾಕ್ಷಗಳನ್ನು ಹಾಜರುಪಡಿಸಿ ತನ್ನ ಸಮರ್ಥನೆ ಮಾಡಿಕೊಳ್ಳಲು ಅವಕಾಶ ಮಾಡಿಕೊಡುವುದು.

ಬ್ಯಾಂಕಿಂಗ್ ಸಂಸ್ಥೆಯಲ್ಲಿ ನೌಕರರ ಮೇಲೆ ಕ್ರಮ ಜರುಗಿಸ ಬೇಕಾದರೆ ಆಂತರಿಕ ವಿಚಾರಣೆ ನಡೆಸಲಾಗುತ್ತದೆ. ಈ ಆಂತರಿಕ ವಿಚಾರಣೆಯಲ್ಲಿ ಬ್ಯಾಂಕಿನ ಒಬ್ಬ ಅಧಿಕಾರಿಯನ್ನು ವಿಚಾರಣಾಧಿ ಕಾರಿಯಾಗಿ ನೇಮಿಸಿ ವಿಚಾರಣೆಯನ್ನು ನಡೆಸಲಾಗುತ್ತದೆ. ವಿಚಾರಣಾಧಿಕಾರಿ ಯಾವುದೇ ಪೂರ್ವಾಗ್ರಹ ಪೀಡಿತವಾಗಿರದೆ ಮತ್ತು ಸ್ವಬುದ್ಧಿಯಿಂದ ಯಾವುದೇ ಆಮಿಷ, ಒತ್ತಡಕ್ಕೆ ಒಳ ಗಾಗದೆ ವಿಚಾರಣೆಯನ್ನು ನಡೆಸಬೇಕಾಗುತ್ತದೆ. ಆತನದು ಇಲ್ಲಿ ಒಬ್ಬ ಅರೆ–ನ್ಯಾಯವಾದಿಯ ಸ್ಥಾನ. ಆತ ಇಬ್ಬರಿಗೂ, ಅಂದರೆ ಬ್ಯಾಂಕಿನ ಪ್ರತಿನಿಧಿಗೂ ಆರೋಪಿಗೂ, ಸಮಾನ ಅವಕಾಶಗಳನ್ನು ಕೊಟ್ಟು ವಿಚಾರಣೆ ನಡೆಸಬೇಕಾಗುತ್ತದೆ.

ವಿಚಾರಣೆಯ ಅನಂತರ ಬ್ಯಾಂಕಿನ ಪ್ರತಿನಿಧಿಯಿಂದ ಆತನ ಒಟ್ಟು ಅಭಿಪ್ರಾಯವನ್ನು ಪಡೆದು ಒಂದು ಪ್ರತಿಯನ್ನು ಆರೋಪಿಯ ಪ್ರತಿನಿಧಿಯ ಅವಗಾಹನೆಗೆ ಒಳಪಡಿಸಿ ತದನಂತರ ರಕ್ಷಣಾಪ್ರತಿನಿಧಿಯ ಒಟ್ಟು ಅಭಿಪ್ರಾಯವನ್ನು ಪಡೆದು ಎರಡನ್ನೂ ಕೂಲಂಕಷವಾಗಿ ಎರಡೂ ಪಕ್ಷದ ದಸ್ತಾವೇಜುಗಳು ಮತ್ತು ಸಾಕ್ಷಿಗಳ ಹೇಳಿಕೆಗಳ ಹಿನ್ನೆಲೆಯಲ್ಲಿ ಹಂತಹಂತವಾಗಿ ಆರೋಪ ಪಟ್ಟಿ ಸಿಂಧುವೋ ಅಥವಾ ಅಸಿಂಧುವೋ ಎಂಬ ನಿರ್ಣಯ ತೆಗೆದುಕೊಳ್ಳಬೇಕು. ತದನಂತರ ಈ ನಿರ್ಣಯವನ್ನು ಶಿಕ್ಷಾಧಿಕಾರಿಗೆ ಕಳುಹಿಸಿಕೊಡುವುದು.

ಶಿಕ್ಷಾಧಿಕಾರಿ ವಿಚಾರಣಾ ವರದಿಯನ್ನು ನೋಡಿ ದೂರು ಸಮರ್ಪಕವಾಗಿ ಆಧಾರ ಸಹಿತ ದೃಢವಾಗಿದೆಯೋ ಇಲ್ಲವೋ ಎನ್ನುವುದನ್ನು ಕೂಲಂಕಷವಾಗಿ ಪರಿಶೀಲಿಸಿ ತನ್ನ ವಿವೇಚನೆ ಯಿಂದ ಶಿಕ್ಷೆ ಏನೆಂಬುದನ್ನು ನಿಶ್ಚಯಿಸಬೇಕಾಗುತ್ತದೆ. ಶಿಕ್ಷೆಯ ತೀವ್ರತೆ, ಗಾತ್ರ, ಅಶಿಸ್ತಿನ ಪ್ರಮಾಣ, ಅದರಿಂದ ಸಂಸ್ಥೆಗೆ ಹಾನಿ ಯಾಗಿದೆಯೋ, ಇಲ್ಲವೋ ಮತ್ತು ಅಶಿಸ್ತಿನ ಹಿಂದಿರುವ ಉದ್ದೇಶ ವನ್ನು ಶಿಕ್ಷೆ ಅವಲಂಬಿಸಿರುತ್ತದೆ. ಶಿಕ್ಷೆಯ ಪ್ರಮಾಣವನ್ನು ನಿರ್ಧರಿ ಸುವುದಕ್ಕೆ ಮೊದಲು ಶಿಕ್ಷಾಧಿಕಾರಿ ವಿಚಾರಣಾಧಿಕಾರಿಯ ಒಟ್ಟು ಅಭಿಪ್ರಾಯದ ವರದಿಯನ್ನು ಆರೋಪಿ ನೌಕರನಿಗೆ ಕಳುಹಿಸ ಕೊಡತಕ್ಕದ್ದು. ತದನಂತರ ಆರೋಪಿ ನೌಕರನಿಗೆ ಸಾಕಷ್ಟು ಸಮಯಾವಕಾಶ ಕೊಟ್ಟು ಅನಂತರ ಶಿಕ್ಷೆಯ ಪ್ರಮಾಣವನ್ನು ತೀರ್ಮಾನಿಸುವುದು.

ಶಿಕ್ಷೆಯನ್ನು ತೀರ್ಮಾನಿಸಬೇಕಾದರೆ ಮಾನವೀಯ ದೃಷ್ಟಿಯೂ ಮುಖ್ಯ. ಇಲ್ಲಿ ಶಿಕ್ಷಾಧಿಕಾರಿಯ ಪಾತ್ರವನ್ನು ಒಬ್ಬ ವೈದ್ಯನಿಗೆ ಹೋಲಿಸಬಹುದು. ಒಬ್ಬ ವೈದ್ಯ ರೋಗಿಯನ್ನು ರೋಗ ಗುಣ ಪಡಿಸುವ ದೃಷ್ಟಿಯಿಂದ ನೋಡುತ್ತಾನೆಯೇ ಹೊರತು ಬೇರಾವ ದೃಷ್ಟಿಯಿಂದಲೂ ಅಲ್ಲ. ರೋಗಿಯ ಅಂಗ ಇಡೀ ದೇಹವನ್ನೇ ಆಕ್ರಮಿಸಿ ಆ ವ್ಯಕ್ತಿಯ ಜೀವಕ್ಕೆ ಅಪಾಯ ತರುವಂತಿದ್ದರೆ ವೈದ್ಯ ಆ ಅಂಗವನ್ನು ಕತ್ತರಿಸಿ ಹಾಕುವ ಹಾಗೆ ಕೆಲವು ಸನ್ನಿವೇಶದಲ್ಲಿ ಬಹಳ ಕಟು ಶಿಕ್ಷೆಯನ್ನು ವಿಧಿಸಬೇಕಾಗುತ್ತದೆ.

ಮನುಷ್ಯನ ನಡವಳಿಕೆ ಕೆಲವು ವೇಳೆ ಬಹಳ ಅಸಹಜವಾಗಿರು ತ್ತದೆ. ಇದು ಯಾವುದೇ ಕಾಲಕ್ಕಾಗಲಿ, ದೇಶಕ್ಕಾಗಲಿ, ಸಂಸ್ಥೆ ಗಾಗಲಿ ಸೀಮಿತವಾಗಿಲ್ಲ. ಸಮಾಜ ನಡೆದುಬಂದಿರುವುದು ಈ ರೀತಿ. ಹೇಗೆ ಕಳ್ಳ ಮತ್ತು ಪೋಲೀಸರು ಒಂದು ಸಮಾಜದಲ್ಲಿರು ತ್ತಾರೋ ಹಾಗೆಯೇ ನಡತೆ, ದುರ್ನಡತೆ, ಶಿಸ್ತು, ಅಶಿಸ್ತು ಇವು ಯಾವುದೇ ಸಂಸ್ಥೆಯಲ್ಲಿ ಸಾಮಾನ್ಯ. ಆದ್ದರಿಂದ ಶಿಸ್ತು ನಡಾವಳಿ ಕ್ರಮ ಒಂದು ಸಂಸ್ಥೆಯ ಅನಿವಾರ್ಯ ಅಂಗವಾಗಿರುತ್ತದೆ. ಅಶಿಸ್ತನ್ನು ಬೆಳೆಯಬಿಟ್ಟಲ್ಲಿ ಸಂಸ್ಥೆಯ ಇರುವಿಕೆಗೇ ಮಾರಕವಾಗ ಬಹುದು. ಇದರ ನಿವಾರಣೆ ಅನಿವಾರ್ಯವಾಗಿದೆ. ಕೆಲವೊಮ್ಮೆ ಗ್ರಾಹಕರ ಸೇವಾ ಉದ್ದೇಶದಿಂದ, ಸಂಸ್ಥೆಯ ಹಿತದೃಷ್ಟಿಯಿಂದ ಅಧಿಕಾರಿ/ನೌಕರ್ವರ್ಗದಲ್ಲಿ ಅಶಿಸ್ತು ಇಣುಕಬಹುದಾಗಿದೆ. ಅಂತಹ ಸಂದರ್ಭದಲ್ಲಿ ಶಿಸ್ತುಕ್ರಮದ ಉಲ್ಲಂಘನೆಯ ಆಪಾದನೆ ಇರಬಹು ದಾದರೂ ತಮಗೆ ಅರಿವಿಲ್ಲದೆ ಈ ಕ್ರಮದಲ್ಲಿ ಸಿಕ್ಕಿಬೀಳಬಹುದಾದ ಅಧಿಕಾರಿ/ನೌಕರ ವರ್ಗದ ರಕ್ಷಣೆ ಆವಶ್ಯಕವೆಂಬುದನ್ನು ಗಮನಿಸ ಬಹುದಾಗಿದೆ. ಹೀಗೆ ಶಿಷ್ಟ ರಕ್ಷಣೆ ಮಾಡಿ ದುಷ್ಟ ಶಿಕ್ಷಣವನ್ನು, ಯಾವುದೇ ಪೂರ್ವಾಗ್ರಹಪೀಡಿತರಾಗದೆ, ಆರೋಪಿಯ ಸಮಾಜದ ಸ್ಥಾನ, ಆತನ ವಿದ್ಯೆ, ನಡವಳಿಕೆ, ಸಾಂಸಾರಿಕ ಸ್ಥಾನಮಾನ ಮತ್ತು ಆತನ ಚಾರಿತ್ರ್ಯವನ್ನು ಗಮನಿಸಿ ನಿರ್ಧರಿಸುವುದಾದಲ್ಲಿ ಸಂಸ್ಥೆಯ ಬೆಳವಣಿಗೆಗೆ ಪೂರಕವಾಗಿರುತ್ತದೆ.

ಈ ಕೆಳಕಂಡ ಚಿತ್ರದಲ್ಲಿ ಶಿಸ್ತುಕ್ರಮ ನಡಾವಳಿಯ ವಿವಿಧ ಹಂತಗಳನ್ನು ತೋರಿಸಲಾಗಿದೆ. (ವಿವರಕ್ಕೆ ಮುಂದಿನ ಪುಟ ನೋಡಿ)

1 ಶಿಕ್ಷಾಧಿಕಾರಿ

2 ವಿಚಾರಣಾಧಿಕಾರಿ

3 ಆರೋಪ ಹಾಜರು ಪಡಿಸುವ ಅಧಿಕಾರಿ

4 ಆರೋಪಿ ಅಧಿಕಾರಿ/ನೌಕರ

5 ರಕ್ಷಣಾ ಪ್ರತಿನಿಧಿ

6 ಬೇಡಿಕೆ ಅಧಿಕಾರಿ

1 ಅಶಿಸ್ತಿನ ಪಟ್ಟಿ/ಪತ್ರ ಸಮಜಾಯಿಸಿ ಕೇಳಿ

2 ದೂರು/ಅಶಿಸ್ತಿನ ಆರೋಪ ಪಟ್ಟಿ

3 ವಿಚಾರಣೆ ನೇಮಕ

4 ವಿಚಾರಣೆ ವರದಿ

5 ಶಿಕ್ಷೆ






## ಸಾಲ ವಸೂಲಾತಿ ಮತ್ತು ಬ್ಯಾಂಕ್ ವಕೀಲರ ಪಾತ್ರ

[19ನೇ ಪುಟದಿಂದ ಮುಂದುವರಿದಿದ]

ಸಾಲ ವಸೂಲಾತಿಯಲ್ಲಿ ವಕೀಲರ ಕ್ರಮ ಕಟ್ಟಕಡೆಯದು. ಹಾಗಾಗಿ ಕಟ್ಟಳೆ ಹೂಡಬೇಕಾದ ಎಷ್ಟೋ ಮೊಕದ್ದಮೆಗಳಲ್ಲಿ ಕಾಲ ಪರಿಮಿತಿ ಮೀರಿ ಹೋಗಿರುತ್ತದೆ. ಅಂತಹ ಸಂದರ್ಭಗಳಲ್ಲಿ ಬ್ಯಾಂಕ್ ವಕೀಲರು ನ್ಯಾಯಾಲಯಗಳಲ್ಲಿ ಬಹಳ ಸಾಹಸಪಡಬೇಕಾಗುತ್ತದೆ. ಅಲ್ಲದೆ ಆರೋಪಿಯೂ ತನ್ನ ಪರವಾಗಿ ವಾದಿಸಲು ವಕೀಲರನ್ನು ನೇಮಿಸಿಕೊಂಡಲ್ಲಿ ಯಾರ ಪರವಾಗಿ ದಾಖಲೆಗಳು ಸಮರ್ಥನೀಯ ಅಂಶಗಳನ್ನು ಹೆಚ್ಚು ತೋರಿಸುತ್ತವೆಯೋ ಅವರ ಪರವಾಗಿ ತೀರ್ಪು ಬರುವುದು ಸಹಜ. ಆದ್ದರಿಂದಲೇ ಎಲ್ಲವನ್ನೂ ಮೊದಲೇ ಸರಿಪಡಿಸಿಕೊಳ್ಳುವುದು ಬ್ಯಾಂಕು ಅಧಿಕಾರಿಗಳ ಕರ್ತವ್ಯ. ದಾವೆ ಹೂಡುವುದು, ಡಿಕ್ರಿ ಪಡೆಯುವುದು ಮತ್ತು ಅವುಗಳ ಜಾರಿ ಮಾಡುವುದು ಇವು ಮಾತ್ರವೇ ಸದ್ಯದ ಪರಿಸ್ಥಿತಿಯಲ್ಲಿ ಬ್ಯಾಂಕ್ ವಕೀಲರು ವಹಿಸುತ್ತಿರುವ ಪಾತ್ರ.



# ಮಾನವ ಸಂಪನ್ಮೂಲ ಅಭಿವೃದ್ಧಿ–ತರಬೇತಿ

ಡಿ. ರಮೇಶರಾವ್
ಮುಖ್ಯ ಗುಮಾಸ್ತ, ಭಾರತೀಯ ಸ್ಟೇಟ್ ಬ್ಯಾಂಕ್, ಐ.ಎಸ್.ಆರ್.ಓ., ವಿಮಾನಪುರ, ಬೆಂಗಳೂರು 17

ಮಾನವ ಸಂಪನ್ಮೂಲ ಅಭಿವೃದ್ಧಿಯ ಸಾಧನೆಗಾಗಿ ಉದ್ಯೋಗಿಗಳಿಗೆ ತರಬೇತಿ ನೀಡಿಕೆ ಹಿಂದಿನಿಂದ ನಡೆದು ಬಂದಿರುವ ಒಂದು ಪದ್ಧತಿ. ಆದರೆ ಇದರ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳುವುದೇ ಇಲ್ಲ. ನೇಮಕಾತಿ ಪೂರ್ವದ ತರಬೇತಿ ಸತ್ವಹೀನ. ಅನಂತರದ ತರಬೇತಿ ಒಂದು ನಾಟಕ. ಅನೇಕರಿಗೆ ಇದು ಸಂಬಳದೊಂದಿಗೆ ದೊರಕುವ ಮೋಜಿನ ರಜೆ. ಇನ್ನು ತರಬೇತಿದಾರರೋ, ಶಾಖೆಗಳಲ್ಲಿ ಬೇಡವಾದವರೇ ಇಲ್ಲಿಗೆ ರವಾನೆಯಾಗುತ್ತಾರೆ. ಇದಕ್ಕೆ ಅಪವಾದವಿಲ್ಲವೆಂದಲ್ಲ. ಆದರೆ ಇದೇ ಸಾಮಾನ್ಯ. ಈ ಸ್ಥಿತಿಯನ್ನು ಸುಧಾರಿಸುವುದು ಹೇಗೆ ? ನಮ್ಮ ಬ್ಯಾಂಕಿಂಗ್ ಕಮ್ಮಟಕ್ಕೆ ಬನ್ನಿ !

**ಮಾನವ ಸಂಪನ್ಮೂಲ ಅಭಿವೃದ್ಧಿಯ ಉದ್ದೇಶ**

ಪ್ರತಿಯೊಬ್ಬ ವ್ಯಕ್ತಿಯನ್ನೂ ಒಂದು ಶಕ್ತಿಶಾಲಿ ಸಮುದಾಯದ ಸದಸ್ಯನನ್ನಾಗಿಸಿ, ಅವನು ಸಂಸ್ಥೆಯ ಪರಿವಾರದ ಕ್ರಿಯಾತ್ಮಕ ಸದಸ್ಯನಾಗಿ ಅದರ ಗುರಿಗಳ ಸಾಧನೆಯ ಕಾರ್ಯದಲ್ಲಿ ಪಾಲುಗೊಂಡು, ಸಾರ್ಥಕತೆಯ ಅನುಭವ ಹೊಂದುವ ಆಶಯದಲ್ಲಿ ತನ್ನೆಲ್ಲ ಸಂಭಾವ್ಯತೆಗಳನ್ನು ಸತ್ಯವಾಗಿಸಿ ಕ್ರಿಯಾತ್ಮಕವಾಗಿಸುವಲ್ಲಿ ಪ್ರೇರೇಪಣೆಯಾಗಿ ವರ್ತಿಸುವ ಒಂದು ನಿರಂತರ ಚಲನಶೀಲ ಶಕ್ತಿ ಹಾಗೂ ಮಾರ್ಗವೇ ಮಾನವ ಸಂಪನ್ಮೂಲ ಅಭಿವೃದ್ಧಿ ಯೋಜನೆ.

**ತರಬೇತಿಯ ಅಭಿವ್ಯಕ್ತಿ**

ತರಬೇತಿ ಒಂದು ವ್ಯವಸ್ಥೆಯ ಅವಿಭಾಜ್ಯ ಅಂಗ. ಸಂಘಟನೆಯಲ್ಲಿ ವಿಕಾಸವನ್ನು ವ್ಯಾಪ್ತಗೊಳಿಸುವುದು ಮತ್ತು ಚೈತನ್ಯವನ್ನು ಉಜ್ಜೀಪನಗೊಳಿಸಿ ಸತತ ಕ್ರಿಯಾ ನಿರತಗೊಳಿಸುವುದು ಹಾಗೂ ವ್ಯಕ್ತಿಗೆ ಸ್ವವಿಕಾಸದ ಹಾಗೂ ಸಂಸ್ಥೆಯ ಪರಿಣಾಮಕಾರೀ ನಿರ್ವಹಣೆಗಾಗಿ ಅವಶ್ಯಕ ಅರಿವು ನೀಡಿ ಕಾರ್ಯ ಕೌಶಲದಲ್ಲಿ ಉತ್ತಮತೆ ಮತ್ತು ಮನೋಭಾವದಲ್ಲಿ ನಾವೀನ್ಯದ ಅಭಿವ್ಯಕ್ತಿಯನ್ನು ನೀಡುವುದು ಇದರ ಉದ್ದೇಶ.

ಮಾನವ ಸಂಪನ್ಮೂಲ ಅಭಿವೃದ್ಧಿಯ ಕಾರ್ಯವ್ಯಾಪ್ತಿಯನ್ನು ನೋಡಿದಾಗ ಕಂಡುಬರುವ ಬಹುಮುಖ್ಯವಾದ ಮೂರು ಅಂಶಗಳೆಂದರೆ ನೇಮಕಾತಿ, ತರಬೇತಿ ಹಾಗೂ ಮಾನವಶಕ್ತಿಯ ಆಯೋಜನೆ. ಸಿಬ್ಬಂದಿಯನ್ನು ಸಂಘಟಿಸಿ ಒಂದು ಮಹಾಶಕ್ತಿಯಾಗಿಸಿ ಸಂಸ್ಥೆಯ ಏಳಿಗೆಗೆ ಶ್ರಮಿಸುವುದು ಅದರ ಮುಖ್ಯಧ್ಯೇಯ, ಮಾನವ ಶಕ್ತಿಯ ಸರಿಯಾದ ಬಳಕೆಗೆ ನೀತಿನಿಯಮಾವಳಿಗಳನ್ನು ರೂಪಿಸುವುದು ಒಂದು ಪ್ರಮುಖ ಕೆಲಸ. ಎಲ್ಲ ರಂಗದಲ್ಲಿಯೂ ಸ್ಪರ್ಧೆಯೇ ಪ್ರಮುಖವಾಗಿರುವ ಈ ಕಾಲದಲ್ಲಿ ನೇಮಕಾತಿ ಮಂಡಳಿಗಳು ಅತಿ ಶ್ರೇಷ್ಠ ಅಭ್ಯರ್ಥಿಗಳನ್ನು ಬ್ಯಾಂಕಿಂಗ್ ಸೇವೆಗೆ ಆರಿಸುತ್ತಿರುವುದು ನಿಜಕ್ಕೂ ಶ್ಲಾಘನೀಯ. ಈ ನಿಟ್ಟಿನಲ್ಲಿ ಬ್ಯಾಂಕಿಂಗ್ ಸೇವೆಗೆ ನೇಮಿಸಲ್ಪಡುವ ವ್ಯಕ್ತಿಯ ವಿಕಾಸ ಹೇಗೆ ಸಾಧ್ಯ ? ಆತನ ಸಂಪನ್ಮೂಲದ ಸರಿಯಾದ ಬಳಕೆ ಹೇಗೆ ? ಈ ನಿಟ್ಟಿನಲ್ಲಿ ಬ್ಯಾಂಕು ನೀಡುವ ತರಬೇತಿಯ ಪಾತ್ರ ಏನು ? ತರಬೇತಿ ವಿಧಿ ವಿಧಾನಗಳು, ಅದರ ಸಮಸ್ಯೆಗಳು, ಅದಕ್ಕೆ ಪರಿಹಾರ —ಇವನ್ನು ವಿವೇಚಿಸಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ.

**ತರಬೇತಿಯ ವಿಧಾನ**

ತರಬೇತಿ ವಿಧಾನ ಸಾಮಾನ್ಯವಾಗಿ ಎರಡು ಬಗೆ: 1 ಪ್ರವೇಶಪೂರ್ವ ತರಬೇತಿ 2 ಸಿಬ್ಬಂದಿ ತರಬೇತಿ ಕೇಂದ್ರಗಳಲ್ಲಿ ವಿವಿಧ ವಿಷಯಗಳ ಮೇಲೆ ನೀಡುವ ತರಬೇತಿ. ಮೊದಲನೆಯದಾಗಿ, ಪ್ರವೇಶ ಪೂರ್ವ ತರಬೇತಿ ಬಹಳ ಮುಖ್ಯವಾಗಿ ಬ್ಯಾಂಕಿನ ಧ್ಯೇಯ, ಗುರಿಯನ್ನು ತಿಳಿಸಿ ಹೇಳುವುದಾಗಿರುತ್ತದೆ. ನೌಕರನ ಹಕ್ಕು—ಕರ್ತವ್ಯಗಳ ಬಗ್ಗೆ ತಿಳುವಳಿಕೆ, ಗುಂಪು ಚರ್ಚೆಗಳ ಮೂಲಕ ವಿವಿಧ ಭಾಗಗಳಿಂದ ಆಯ್ಕೆಯಾದ. ಅಭ್ಯರ್ಥಿಗಳ ಮನಸ್ಸನ್ನು ಒಂದೆಡೆ ಕೇಂದ್ರೀಕರಿಸುವುದು, ತನ್ಮೂಲಕ ಸಂಸ್ಥೆಯ ಏಳಿಗೆಗೆ ಶ್ರಮಿಸಲು ಕರೆ ನೀಡುವುದೇ ಈ ಕಾರ್ಯಕ್ರಮದ ಉದ್ದೇಶ. ಎರಡನೆಯದಾಗಿ ಸಿಬ್ಬಂದಿ ತರಬೇತಿ ಕೇಂದ್ರದಲ್ಲಿ ನೀಡುವ ತರಬೇತಿ ಕಾರ್ಯಕ್ರಮಗಳು ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆ ತಯಾರಿಸುವ ವಾರ್ಷಿಕ ವರದಿ ಆಯಾ ವಲಯದಲ್ಲಿಯ ಕಾರ್ಯವ್ಯಾಪ್ತಿಯಲ್ಲಿ ಬರುವ ಪ್ರಾದೇಶಿಕ ಕಛೇರಿಗಳಿಗೆ ಆಯಾ ವರ್ಷಕ್ಕೆ ತರಬೇತಿ ನೀಡಲು ಆರಿಸಿದ ವಿಷಯಗಳು ಯಾವ ಯಾವ ಸಿಬ್ಬಂದಿ ತರಬೇತಿ ಕೇಂದ್ರದಲ್ಲಿ ಯಾವ ಯಾವ ವಿಷಯದ ಬಗ್ಗೆ ತರಬೇತಿ ನೀಡಬೇಕು ಮತ್ತು ಎಷ್ಟು ಮಂದಿ ಸಿಬ್ಬಂದಿ ವರ್ಗದವರು ಆ ವರ್ಷದಲ್ಲಿ ತರಬೇತಿ ಹೊಂದಬೇಕು ಎಂಬುದರ ಬಗ್ಗೆ ಮಾಹಿತಿಯನ್ನು ಒ

ಗೊಂಡಿರುತ್ತದೆ. ಪ್ರಾದೇಶಿಕ ಕಛೇರಿಯಲ್ಲಿನ ಸಿಬ್ಬಂದಿ ವಿಭಾಗ ಆರಿಸಿದ ಶಾಖೆಗಳಿಗೆ ಕಳುಹಿಸಿದ ಅನುಮತಿ ಪತ್ರದ ಆಧಾರದ ಮೇಲೆ ಶಾಖೆಗಳಿಂದ ಉದ್ಯೋಗಿಗಳನ್ನು ತರಬೇತಿ ಕೇಂದ್ರಗಳಿಗೆ ಪ್ರತಿನಿಯೋಜಿಸಲಾಗುವುದು. ತರಬೇತಿ ಕೇಂದ್ರದಲ್ಲಿ ಆಯ್ದು ವಿಷಯದ ಮೇಲೆ ಗಹನವಾದ ಚರ್ಚೆ, ಉಪನ್ಯಾಸ ನೀಡಿಕೆ, ಅರಿವು ಮೂಡಿಸುವಿಕೆ, ನಡವಳಿಕೆ ವಿಜ್ಞಾನ ಹಾಗೂ ಉತ್ತಮ ಗ್ರಾಹಕ ಸೇವೆಯ ಬಗ್ಗೆ ತಿಳಿಸಿ ಹೇಳಿ ಉದ್ಯೋಗಿಗಳ ಮನೋವಿಕಾಸಕ್ಕೆ ಪ್ರಯತ್ನ ಮಾಡಲಾಗುತ್ತದೆ. ಇದಲ್ಲದೆ ಒಳ್ಳೆಯ ಊಟ, ತಿಂಡಿ ಹಾಗೂ ತಂಗುವ ವ್ಯವಸ್ಥೆ, ವಾಚಾನಾಲಯ ಸೌಲಭ್ಯ ಹಾಗೂ ಮನರಂಜನ ಸೌಲಭ್ಯಗಳನ್ನು ನೀಡುವುದೂ ಒಂದು ಪ್ರಮುಖ ಅಂಶವಾಗಿದೆ.

### ತರಬೇತಿ ಸೌಲಭ್ಯಗಳು

1 ಸಮಸ್ಯೆ ಶಾಖಾಮಟ್ಟದಲ್ಲಿಯೇ ಪ್ರಾರಂಭವಾಗುತ್ತದೆಂದರೆ ತಪ್ಪಾಗಲಾರದು. ಒಂದು ರೀತಿಯಲ್ಲಿ ಶಾಖಾರಾಜಕೀಯ ಎನ್ನ ಬಹುದೇನೋ. ಸೇವಾಹಿರಿತನಕ್ಕನುಗುಣವಾಗಿ ತರಬೇತಿಗೆ ಹೋಗುವ ಪರಿ ಒಂದೆಡೆ ಇದ್ದರೆ,ಶಾಖಾವ್ಯವಸ್ಥಾಪಕರ ಮರ್ಜಿಯ ಮೇಲೆ ತರಬೇತಿಗೆ ಹೋಗುವ ಪರಿ ಮತ್ತೊಂದೆಡೆ.

2 ಈಗೀಗ ತರಬೇತಿ ನೀಡುವುದು ಒಂದು ಯಾಂತ್ರಿಕ ಕ್ರಿಯೆಯ ಮಟ್ಟಕ್ಕೆ ಇಳಿದು ಹೋಗಿರುವುದು ವಿಪರ್ಯಾಸವೇ ಸರಿ. ನಿರ್ದಿಷ್ಟ ಸಂಖ್ಯೆಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನಿರ್ದಿಷ್ಟ ಸಂಖ್ಯೆಯ ಅಭ್ಯರ್ಥಿಗಳನ್ನಷ್ಟೆ ಆರಿಸುವುದು. ಇದೆಲ್ಲ ಇಲಾಖೆಯ ಪೂರ್ವನಿಯೋಜಿತ ಗುರಿ ಮತ್ತು ಹೇಗೋ ಕಾರ್ಯಕ್ರಮವನ್ನು ಮುಗಿಸುವ ಆತುರತೆಯಿಂದ ಕೂಡಿದ್ದಾಗಿರುವುದು.

3 ಕೆಲವು ಬಾರಿ ಬ್ಯಾಂಕಿನ ದೈನಂದಿನ ವ್ಯವಹಾರಗಳ ಕಾರ್ಯಾ ಚರಣೆಯ ವ್ಯಾಪ್ತಿಯಿಂದ ಹೊರಗಿಡಬೇಕಾದವರನ್ನು ಉಪನ್ಯಾಸಕ ರಾಗಿ ನೇಮಿಸುವ ಕ್ರಮ.

4 ಪೂರ್ವನಿಯೋಜಿತ ಯೋಚನೆ ಇಲ್ಲದೆ ಕೆಲವೊಮ್ಮೆ ಕಾರ್ಯ ಕ್ರಮಗಳ ವ್ಯವಸ್ಥೆ. ಭಾಗವಹಿಸುವ ಪ್ರಶಿಕ್ಷಣಾರ್ಥಿಗಳಲ್ಲಿ ಕೆಲ ವೊಮ್ಮೆ ತರಬೇತಿಯ ವಿಷಯದ ಬಗ್ಗೆ ಸ್ವಲ್ಪವಾದರೂ ಅರಿವೇ ಇರುವುದಿಲ್ಲ. ಶಾಖೆಗಳಲ್ಲಿ ಮಾಡುವ ದೈನಂದಿನ ಕೆಲಸಕ್ಕೂ ತರಬೇತಿಯಲ್ಲಿ ಅರಿಯಬೇಕಾದ ವಿಷಯಕ್ಕೂ ಕೆಲವೊಮ್ಮೆ ಸಂಬಂಧವಿರದೇ ಇರದು. ಉದಾ : "ಕೃಷಿ ಬ್ಯಾಂಕಿಂಗ್" ಪ್ರಧಾನ ವಾಗಿರುವ ಶಾಖೆಗೆ "ವಿದೇಶಿ ವಿನಿಮಯ"ದ ಬಗೆಗಿನ ತರಬೇತಿಯಲ್ಲಿ ಭಾಗವಹಿಸಲು ಪ್ರತಿನಿಯೋಜಿಸಲು ಬರುವ ಕರೆ.

5 ತರಬೇತಿಯ ಅನಂತರ ಶಾಖೆಯಲ್ಲಿ ಮುಂಗಟ್ಟೆಯಲ್ಲಿ ಕುಳಿತು ಕೆಲಸ ಮಾಡುವಾಗ ಕಾನೂನು ಆಚರಣೆಯಲ್ಲಿನ ವೈರುಧ್ಯ ಗಳು ಎದುರಾಗುವುದು.

6 ಹೆಚ್ಚಾಗಿ ಮಹಿಳೆಯರು ಬ್ಯಾಂಕಿಂಗ್ ಕ್ಷೇತ್ರದಲ್ಲಿ ಕಾಲಿಟ್ಟಿ ದ್ದರೂ ತರಬೇತಿಗೆ ಹೋಗಬೇಕಾಗಿ ಬಂದಾಗ ಅವರು ಹಿಂಜರಿ ಯುವುದು.

7 ಬಹುಪಾಲು ತರಬೇತಿ ಕೇಂದ್ರಗಳಲ್ಲಿನ ಊಟ ತಿಂಡಿಯು ವ್ಯವಸ್ಥೆ ಕಳಪೆ ಮಟ್ಟದ್ದಾಗಿರುವುದು. ವಾಚನಾಲಯ ಸೌಲಭ್ಯದ ನಿರುಪಯೋಗ, ಮನರಂಜನೆಯ ಸೌಲಭ್ಯಗಳ ಮಿತಿಮೀರಿದ ಬಳಕೆ, ತನ್ಮೂಲಕ ಪ್ರಶಿಕ್ಷಣಾರ್ಥಿಗಳ ಆಸಕ್ತಿ ತರಬೇತಿ ವಿಷಯದ ಮಟ್ಟಿಗೆ ಕುಂಠಿತವಾಗುವುದು.

8 ವಿಷಾದನೀಯ ಸಂಗತಿಯೆಂದರೆ, ತರಬೇತಿಯಲ್ಲಿ ಭಾಗವಹಿ ಸುವ ಪ್ರಶಿಕ್ಷಣಾರ್ಥಿಗಳಲ್ಲಿ ಸ್ವಲ್ಪಮಟ್ಟಿಗೆ 'ಪಾವತಿಯ ರಜೆ' ಯನ್ನು ಅನುಭವಿಸುವ ಮನೋಭಾವವಿರುವುದು.

### ಪರಿಹಾರ–ಸಲಹೆ–ಸೂಚನೆಗಳು

1 ತರಬೇತಿಗೆ ಕಳುಹಿಸುವ ಮುಂಚೆ ಸರಿಯಾದ ಅರ್ಹ ಅಭ್ಯರ್ಥಿಯ ಆಯ್ಕೆ. ಪ್ರಶಿಕ್ಷಣಾರ್ಥಿ ಶಾಖೆಗೆ ಮರಳಿದ ಬಳಿಕ ತಾನು ಅರಿತ ಕಲಿತ ವಿಷಯಗಳನ್ನು ಶಾಖೆಯಲ್ಲಿ ಇತರೆ ಸಿಬ್ಬಂದಿ ಯೊಡನೆ ವಿನಿಮಯಮಾಡಿಕೊಳ್ಳುವ ಪರಿಪಾಠ ಬೆಳೆಸಿಕೊಳ್ಳುವಿಕೆ.

2 ಸಂದರ್ಶಕ ಭೋದಕವರ್ಗ ಶಾಖಾ ಭೇಟಿಯ ಕಾರ್ಯ ಕ್ರಮದ ಮುಂದುವರಿಯುವಿಕೆ. ಎಲ್ಲಾ ಸಿಬ್ಬಂದಿಯೊಡನೆ ವಿಚಾರ ವಿನಿಮಯ ನಡೆಸುವುದು.

3 ತರಬೇತಿ ಸಮಯದಲ್ಲಿ ಹೆಚ್ಚಾಗಿ ನೈಜ ಘಟನೆಗಳನ್ನು ಉದಾಹರಿಸಿ ಅವುಗಳಿಂದ ಅನುಕೂಲ—ಪ್ರತಿಕೂಲ ಪರಿಣಾಮ ಗಳನ್ನು ಚರ್ಚಿಸುವುದು.

4 ತರಬೇತಿಗೆ ನಿಯೋಜಿಸಲ್ಪಟ್ಟ ಉದ್ಯೋಗಿ ತರಬೇತಿಯ ವಿಷಯದ ಅರಿವಿಲ್ಲದೆ ಇದ್ದಲ್ಲಿ ತರಬೇತಿಗೆ ತೆರಳುವ ಮುನ್ನ ಪ್ರಧಾನ ಕಛೇರಿಯಿಂದ ಬರುವ ಸುತ್ತೋಲೆಯಿಂದಾಗಲಿ, ಶಾಖೆ ಯಲ್ಲಿ ಲಭ್ಯವಿರುವ ಕ್ರೋಡೀಕೃತ ಸುತ್ತೋಲೆಯಿಂದಾಗಲಿ ಸ್ವಲ್ಪಮಟ್ಟಿನ ಅರಿವು ಮೂಡಿಸಿಕೊಳ್ಳುವುದು.

5 ಪ್ರಧಾನ ಕಛೇರಿ ಪ್ರಾದೇಶಿಕ ಕಛೇರಿಗಳ ಸಿಬ್ಬಂದಿ ಇಲಾಖೆ ಕಾನೂನು ಇಲಾಖೆಗಳ ಅಧಿಕಾರಿಗಳನ್ನು ಆಹ್ವಾನಿಸಿ ಶಿಕ್ಷಣಾರ್ಥಿ ಗಳ ಜೊತೆ ಕಾನೂನು ಆಚರಣೆಯಲ್ಲಿನ ತೊಡಕುಗಳ ಬಗ್ಗೆ ಚರ್ಚಿಸುವುದು.

6 ಹೆಚ್ಚು ಹೆಚ್ಚು ದೃಶ್ಯ ಶ್ರಾವ್ಯ ಮಾಧ್ಯಮಗಳ ಬಳಕೆ. ತರಬೇತಿಯಲ್ಲಿ ಪ್ರಾಯೋಗಿಕ ಕಾರ್ಯಕ್ರಮಗಳಿಗೆ ಹೆಚ್ಚು ಪ್ರಾಧಾನ್ಯ ನೀಡುವುದು.

7 ಸರ್ಕಾರಿ, ಅರೆಸರ್ಕಾರಿ, ಸಾರ್ವಜನಿಕ ಸಂಸ್ಥೆಗಳಿಂದ ಅಧಿಕಾರಿ ಗಳನ್ನು ಆಹ್ವಾನಿಸಿ, ವಿಷಯಕ್ಕೆ ಸಂಬಂಧಿಸಿದ ಹಾಗೆ ಮುಖಾ ಮುಖಿ ಚರ್ಚೆಗೆ ಅವಕಾಶ ಕಲ್ಪಿಸುವುದು.

8 ತರಬೇತಿ ಕೇಂದ್ರಗಳು ಕಡ್ಡಾಯವಾಗಿ ಮನೆವಾರ್ತೆ ಪತ್ರಿಕೆ ಗಳನ್ನು ಪ್ರಕಾಶಿಸುವುದು. ತರಬೇತಿ ವಿಷಯದ ಬಗ್ಗೆ, ಬ್ಯಾಂಕಿನ ಆಗುಹೋಗುಗಳ ಬಗ್ಗೆ ಮಾಹಿತಿ ನೀಡುವುದರ ಮೂಲಕ ಶಾಖೆ ಗಳ ವ್ಯವಹಾರದ ಅಭಿವೃದ್ಧಿಗೆ ಸಹಕಾರಿಯಾಗುವುದು.

9 ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆ ಪ್ರತಿಯೊಬ್ಬ ನೌಕರನ ಸಂಪೂರ್ಣ ಮಾಹಿತಿಯನ್ನು ಪಡೆದು "ಮಾಹಿತಿ ಬ್ಯಾಂಕ್" ರೂಪದಲ್ಲಿ ಶೇಖರಿಸಿ ತನ್ಮೂಲಕ ನೌಕರರ ಏಳಿಗೆಗೆ ಶ್ರಮಿಸುವುದು.

ನಿಷ್ಪಕ್ಷಪಾತ ನಿರ್ಧಾರಗಳನ್ನು ತೆಗೆದುಕೊಳ್ಳುವ ಜವಾಬ್ದಾರಿ ವಹಿಸುವುದು.

10 ಅಧಿಕಾರಿಗಳ ಸಂಘ, ನೌಕರರ ಸಂಘಗಳ ಪದಾಧಿಕಾರಿಗಳಿಗಾಗಿ ವಿಶೇಷ ತರಬೇತಿ ಕಾರ್ಯಕ್ರಮಗಳ ಕಡ್ಡಾಯ ನಡೆಸುವಿಕೆ, ತನ್ಮೂಲಕ ವ್ಯವಸ್ಥಾಪಕ—ನೌಕರವರ್ಗದ ನಡುವಿನ ಕೈಗಾರಿಕಾ ಸಂಬಂಧದಲ್ಲಿ ಸೌಹಾರ್ದಯುತ ಸುಧಾರಣೆ ತರುವಲ್ಲಿ ಪ್ರಯತ್ನಿಸುವುದು.

11 ಎಲ್ಲಕ್ಕಿಂತಲೂ ಮಿಗಿಲಾಗಿ ತರಬೇತಿಯಲ್ಲಿ ಪಾಲ್ಗೊಳ್ಳುವ ಉದ್ಯೋಗಿಯಲ್ಲಿನ ಕರ್ತವ್ಯಪ್ರಜ್ಞೆ, ಸಮಯಪಾಲನೆ, ಆತನ ಸಕ್ರಿಯ ಪಾಲ್ಗೊಳ್ಳುವಿಕೆ, ಕರಾರುವಾಕ್ಕಾದ ಮೌಲ್ಯಾಂಕನ ಹಾಗೂ ಪ್ರಾಮಾಣಿಕ ಪರ್ಯಾವರ್ತನೆ ಇದು ತನ್ನಿಂದ ತಾನೇ ಉದ್ಭವಿಸಬೇಕಾದ ಪರಿಹಾರವಾಗಬಲ್ಲದು. ತರಬೇತಿಗಾಗಿ ಬ್ಯಾಂಕುಗಳು ವಿನಿಯೋಗಿಸುವ ಹಣ ಬಹಳ ಅಪಾರವಾದದ್ದು. ಇದು ಸರಿಯಾದ ರೀತಿಯಲ್ಲಿ ಸದುಪಯೋಗವಾಗುವಂತೆ ನೋಡಿಕೊಳ್ಳುವುದು ಎಲ್ಲರ ಆದ್ಯ ಕರ್ತವ್ಯವಾಗಿದೆ.

ತರಬೇತಿ ಒಂದು ನಿರಂತರ ಪ್ರಕ್ರಿಯೆ. ಪ್ರತಿ ಹಂತದಲ್ಲೂ ವ್ಯಕ್ತಿಗೆ ತರಬೇತಿ ನೀಡುವುದು ಅತ್ಯಾವಶ್ಯಕ. ಆತ ಕೆಲಸ ಮಾಡುವ ಪರಿಸರದಲ್ಲಿ ಕೆಲಸದ ಒತ್ತಡದಲ್ಲಿ ತಾನು ತರಬೇತಿಯಲ್ಲಿ ಗ್ರಹಿಸಿದ ಹಲವಾರು ವಿಷಯಗಳನ್ನು ಮರೆಯುವ ಸಂಭವ ಅಥವಾ ಬಳಸದೇ ಇರುವ ಸಂಭವ ಬರಬಹುದು. ಹಾಗಾಗಿ ಇನ್ನೊಮ್ಮೆ ವಿಷಯಗಳ ಪುನರಾವರ್ತನೆ ಆದರೂ ತಪ್ಪೆನಿಸದು. ತರಬೇತಿದಾರ ಶಿಕ್ಷಣಾರ್ಥಿಯ ಸಂಬಂಧ ಶಾಲಾಕಾಲೇಜು ದಿನಗಳ ಗುರು-ಶಿಷ್ಯರ ಸಂಬಂಧವಾಗದೆ ಇಬ್ಬರು ಆತ್ಮೀಯ ಸ್ನೇಹಿತರ ನಡುವಣ ಫಲಪ್ರದ ಚರ್ಚೆಯಾದರೆಷ್ಟು ಚೆನ್ನ ? ಈ ನಿಟ್ಟಿನಲ್ಲಿ ನಾವು ಒಟ್ಟಾಗಿ ಪ್ರಯತ್ನಿಸಿದರೆ ವ್ಯಕ್ತಿಯ ಸ್ವವಿಕಾಸದ ಜೊತೆಗೆ ಸಂಸ್ಥೆಯ ಸರ್ವತೋಮುಖ ಬೆಳವಣಿಗೆಯಾಗಬಲ್ಲದು. ✱

## ಬ್ಯಾಂಕಿಂಗ್ ಕಮ್ಮಟಗಳ ವಿವರ

| | ಸ್ಥಳ | ದಿನಾಂಕ | ಜಿಲ್ಲೆ |
|---|---|---|---|
| 1 | ಮೈಸೂರು | ಏಪ್ರಿಲ್ 6–9, 1982 | ಮೈಸೂರು |
| 2 | ಶಿವನಸಮುದ್ರ | ಅಕ್ಟೋಬರ್ 23–28, 1982 | ಮಂಡ್ಯ |
| 3 | ಶಿರಸಿ | ಏಪ್ರಿಲ್ 1–6, 1983 | ಉತ್ತರ ಕನ್ನಡ |
| 4 | ಹೊಸಪೇಟೆ | ನವೆಂಬರ್ 1–6, 1983 | ಬಳ್ಳಾರಿ |
| 5 | ಮಡಿಕೇರಿ | ಜುಲೈ 9–14, 1984 | ಕೊಡಗು |
| 6 | ಬಾದಾಮಿ | ಸೆಪ್ಟೆಂಬರ್ 30 ರಿಂದ ಅ. 5, 1984 | ಬಿಜಾಪುರ |
| 7 | ಶಿವಮೊಗ್ಗ | ಮಾರ್ಚ್ 31 ರಿಂದ ಏ. 5, 1985 | ಶಿವಮೊಗ್ಗ |
| 8 | ಹುಬ್ಬಳ್ಳಿ | ಅಕ್ಟೋಬರ್ 20–25, 1985 | ಹುಬ್ಬಳ್ಳಿ |
| 9 | ಶೃಂಗೇರಿ | ಏಪ್ರಿಲ್ 20–25, 1986 | ಚಿಕ್ಕಮಗಳೂರು |
| 10 | ಹಾಸನ | ಅಕ್ಟೋಬರ್ 19–24, 1986 | ಹಾಸನ |
| 11 | ಗುಬ್ಬಿ | ಏಪ್ರಿಲ್ 12–17, 1987 | ತುಮಕೂರು |
| 12 | ರಾಯಚೂರು | ಸೆಪ್ಟೆಂಬರ್ 6–11, 1987 | ರಾಯಚೂರು |
| 13 | ಪುತ್ತೂರು | ಮಾರ್ಚ್ 27 ರಿಂದ ಏ. 1, 1988 | ದಕ್ಷಿಣ ಕನ್ನಡ |
| 14 | ಬೆಳಗಾವಿ | ಡಿಸೆಂಬರ್ 4–9, 1988 | ಬೆಳಗಾವಿ |
| 15 | ಬೀದರ್ | ಮಾರ್ಚ್ 5–10, 1989 | ಬೀದರ್ |
| 16 | ದಾವಣಗೆರೆ | ಡಿಸೆಂಬರ್ 24–28, 1989 | ಚಿತ್ರದುರ್ಗ |
| 17 | ಕೋಲಾರ | ಏಪ್ರಿಲ್ 27 ರಿಂದ ಮೇ 2, 1990 | ಕೋಲಾರ |
| 18 | ಬೆಂಗಳೂರು | ಸೆಪ್ಟೆಂಬರ್ 28–30, 1990 (ಕಮ್ಮಟದ 100ನೇ ದಿನ) | ಬೆಂಗಳೂರು |
| 19 | ಗುಲ್ಬರ್ಗ | ಡಿಸೆಂಬರ್ 23–28, 1990 | ಗುಲ್ಬರ್ಗ |
| 20 | ಕಾಸರಗೋಡು | ಅಕ್ಟೋಬರ್ 13–18, 1991 | ಕಾಸರಗೋಡು, ಕೇರಳ |
| 21 | ಮಂಡ್ಯ | ಮೇ 5–24, 1992 | ಮಂಡ್ಯ |
| 22 | ಸೊಲ್ಲಾಪುರ | ಅಕ್ಟೋಬರ್ 18–23, 1992 | ಮಹಾರಾಷ್ಟ್ರ |
| 23 | ಗಾಜನೂರು | ಜೂನ್ 19–24, 1993 | ಶಿವಮೊಗ್ಗ |
| 24 | ಹಿರೇಮಗಳೂರು | ಜೂನ್ 6–10, 1994 | ಚಿಕ್ಕಮಗಳೂರು |
| 25 | ಮೈಸೂರು | ಅಕ್ಟೋಬರ್ 23–28, 1994 (ಬೆಳ್ಳಿ ಕಮ್ಮಟ) | ಮೈಸೂರು |

(ಸಂಗ್ರಹ) :ಬಿ. ಎಸ್. ಚಂದ್ರಶೇಖರ್
ಭಾರತೀಯ ಸ್ಟೇಟ್ ಬ್ಯಾಂಕ್, ವಲಯ ಕಛೇರಿ, ಬೆಂಗಳೂರು

R. N. 36702/83



PRINTED BY G. H. KRISHNAMURTHY, MYSORE PRINTING AND PUBLISHING HOUSE, CLOCK TOWER SQUARE, MYSORE-1